# ಬಸವಪೂರ್ವಯುಗದ 'ವೀರಶೈವ'ದ ಅಧ್ಯಯನಕ್ಕೊಂದು ಆಕರ

ಡಾ॥ ಎಸ್. ವಿದ್ಯಾಶಂಕರ



ಸಾಧನೆ : ಸಂಪುಟ 8, ಸಂಚಿಕೆ 4 ; ಅಕ್ಟೋಬರ್–ಡಿಸೆಂಬರ್ 1979
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಭಾರತೀಯ ಪರಿಸರದಲ್ಲಿ ಅಭ್ಯುದಯ ಪರವಾದ ಮಾನವೀಯ ಮೌಲ್ಯಗಳನ್ನು ಪ್ರಸರಣ ಮಾಡುವ ಉದಾತ್ತ ಧ್ಯೇಯವನ್ನು ಹೊಂದಿರುವ ಧರ್ಮವು ತನ್ನ ಅಸ್ತಿತ್ವವನ್ನು ಸ್ಥಿರೀಕರಿಸಲು ಪರಂಪರೆಯೊಡನೆ ಅನಿವಾರ್ಯವಾಗಿ, ಸಮಕಾಲೀನ ಸಮಾಜದೊಡನೆ ನೇರವಾಗಿ ಸಂಘರ್ಷವನ್ನು ಎದುರಿಸಬೇಕಾಗುತ್ತದೆ. 12ನೇ ಶತಮಾನದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದ ವೀರಶೈವ ಧರ್ಮವು ಪ್ರಾಚೀನವೂ ಬಲಿಷ್ಠವೂ, ಪ್ರತಿಷ್ಠಿತವೂ ಆಗಿದ್ದ, ಸನಾತನವಾದ ಸಾಹಿತ್ತಿಕ–ಸಾಂಸ್ಕೃತಿಕ ನೆಲೆಗಟ್ಟಿನಮೇಲೆ ಸ್ಥಾಪಿತವಾಗಿದ್ದ ವೈದಿಕ ಧರ್ಮದೊಂದಿಗೂ, ರಾಜರಿಂದ ಪೋಷಿತವಾಗಿ ಪ್ರತಿಭಾವಂತ ಕವಿಗಳ ಕಾವ್ಯಮುಖೇನ ಪ್ರಸಾರಗೊಂಡ ನಿಷ್ಠಾವಂತ ಧರ್ಮಾಭಿಮಾನಿಗಳ ಮೂಲಕ ವ್ಯವಸ್ಥಿತವಾಗಿ ಪ್ರಚಾರಗೊಂಡ 10ನೇ ಶತಮಾನದ ಜೈನಧರ್ಮದೊಂದಿಗೂ, ಬೌದ್ಧಿಕವಾಗಿ ಹಿಂದುಳಿದ ಜನರ ಪ್ರಾಚೀನ ನಂಬಿಕೆಗಳು, ಕಟ್ಟುಪಾಡುಗಳು, ಅಂಧ ಆಚರಣೆಗಳು, ಸಂಪ್ರದಾಯಪರವಾದ ಮೌಢ್ಯಗಳು ಇವುಗಳೊಂದಿಗೂ, ಪುರೋಹಿತ ವರ್ಗದ ದರ್ಪ, ದೌರ್ಜನ್ಯಗಳೊಂದಿಗೂ ಬಿರುಸಿನ ಹೋರಾಟ ನಡೆಯಿಸಿ ಸಮಾಜದಲ್ಲಿ ತನ್ನ ಅಸ್ತಿತ್ವವನ್ನು ಪ್ರಮಾಣಿಸಬೇಕಾಗಿದ್ದಿತು. ಬಸವಾದಿ ಪ್ರಮಥರು ದೀನದಲಿತರ ಉದ್ಧಾರವನ್ನು ಪ್ರಧಾನವಾದ ಗುರಿಯಾಗಿ, ಕಾರ್ಯರೂಪಕ್ಕೆ ಅದನ್ನು ತರಹೊರಟು ಪರಂಪರೆಯ ಬಳುವಳಿಯಾಗಿ ಬಂದಿದ್ದ ಸಮಾಜದಲ್ಲಿನ ವರ್ಣ ಹಾಗೂ ವರ್ಗ ವ್ಯವಸ್ಥೆಯನ್ನೂ, ಶೋಷಣಾರಹಿತ ಆರ್ಥಿಕ ಭದ್ರತೆಯುಳ್ಳ ನವಸಮಾಜವನ್ನೂ ಸಂಘಟಿಸಿದರು. ಅವರು ನಡೆಸಿದ ಸಾಮಾಜಿಕ, ಧಾರ್ಮಿಕ ಹಾಗೂ ಸಾಹಿತ್ತಿಕ ಚಳುವಳಿ ಬಹಳ ಮಹತ್ವದ್ದು ; ಅರ್ಥಪೂರ್ಣವಾದದ್ದು. ಚಲನಶೀಲ ಬದುಕಿನಲ್ಲಿ ಅವರು ತರಹೊರಟ ಬದಲಾವಣೆಗಳು ; ತುಕ್ಕುಗಟ್ಟಿದ ಜೀವನಮೌಲ್ಯಗಳ ನವೀಕರಣ ; ಅಂತ್ಯೋದಯ ಚಳುವಳಿಯ ಮೂಲಕ ಸಾಮಾಜಿಕ ಜಾಗೃತಿ–ಇವು ಸಮೃದ್ಧ ಬದುಕಿನ ಬಗೆಗೆ ನಂಬಿಕೆ ಇಟ್ಟುಕೊಂಡಿದ್ದವರ ಪಾಲಿಗೆ, ನ್ಯಾಯವಾದ ಹಕ್ಕುಗಳು ಎಲ್ಲರಿಗೂ ದಕ್ಕಬೇಕೆಂದು ಪ್ರಾಮಾಣಿಕವಾಗಿ ಹೋರಾಟ ನಡೆಸಿದ್ದವರಿಗೆ ಭರವಸೆಯ ಸಂಕೇತವಾಗಿದ್ದಿತು. ಅತ್ಯಪೂರ್ವವಾದ ಈ ಕ್ರಾಂತಿಯ ಫಲಾಫಲಗಳ ಬಗೆಗೆ ನಮಗೆ ತಿಳುವಳಿಕೆ ಸಿಗುವುದು ಆ ಕಾಲದಲ್ಲೇ ದೈನಂದಿನ ಬದುಕು ಅನುಭವಗಳೊಡನೆ ಸಮರಸವಾಗಿ ಬಂದ,

ಸಮಾಜದ ಎಲ್ಲ ಸ್ತರದ ವ್ಯಕ್ತಿಗಳ ಅಂತರಂಗ ವ್ಯಾಪಾರದ ಅಭಿವ್ಯಕ್ತಿಯಾಗಿ ಬಂದ ವಚನ ವಾಙ್ಮಯದಲ್ಲಿ.

12ನೇ ಶತಮಾನದಲ್ಲೇ ನಡೆದ ಕಲ್ಯಾಣಕ್ರಾಂತಿಯು ಪ್ರಗತಿ ವಿರೋಧಿ ಶಕ್ತಿಗಳ ಅರಾಜಕ ದೌರ್ಜನ್ಯಗಳ ಎಡೆಯಲ್ಲಿ ಹಾಗೂ ಮುಂದಿನ ಶತಮಾನಗಳಲ್ಲಿ ಕರ್ನಾಟಕದ ಮೇಲೆ ನಡೆದ ಪರಕೀಯರ ಧಾಳಿಯು ಪರಿಣಾಮವಾದ ಸಾಮಾಜಿಕ ಜೀವನದ ಅಸ್ತವ್ಯಸ್ತ ಸ್ಥಿತಿಯಲ್ಲಿ ಕಲ್ಯಾಣದ ಶರಣರು ನಡೆಸಿದ ಮಹತ್ವಪೂರ್ಣ ಚಳುವಳಿಯ ಧ್ಯೇಯ ಧೋರಣೆಗಳನ್ನು ತಿಳಿಸುವ ಅಮೂಲ್ಯ ದಾಖಲೆಗಳಾದ ವಚನ ಸಾಹಿತ್ಯ ರಾಶಿ ಅಜ್ಞಾತವಾಯಿತು, ನಾಶವಾಯಿತು. ಇಂದು ಉಳಿದುಳಿದ ವಾಙ್ಮಯದಿಂದಲೇ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಇತಿಹಾಸವನ್ನು ನಾವು ಪುನರ್ನಿರ್ಮಿಸಬೇಕಾಗಿದೆ.

12ನೇ ಶತಮಾನದಲ್ಲಿ ವ್ಯಾಪಕವಾಗಿ ಸಾಮಾಜಿಕ ಸ್ಥಾನಮಾನಗಳನ್ನು ಪಡೆದುಕೊಂಡ ವೀರಶೈವ ಧರ್ಮದ ಬೆಳವಣಿಗೆಯ ಘಟ್ಟಗಳನ್ನು, ಅದರ ಏಳುಬೀಳುಗಳನ್ನು, ಅದರ ಗುಣ-ದೋಷಗಳನ್ನು ಆ ಧರ್ಮದ ಸಾಹಿತ್ಯದ ಮೂಲಕ ನಾವು ಗುರುತಿಸುವ ಪ್ರಯತ್ನ ಮಾಡುತ್ತೇವೆ. ಒಂದು ಧರ್ಮ ಸಮಾಜ ವ್ಯವಸ್ಥೆಯಲ್ಲಿ 'ಪ್ರತಿಷ್ಠಿತ'ವಾಗುವುದಕ್ಕೆ ಮುನ್ನ ಅದು ಪಡೆದಿದ್ದ ಸ್ಥಾನಮಾನಗಳೇನು? ಪ್ರಾರಂಭಿಕ ಅವಸ್ಥೆ ಯಾವ ರೀತಿಯದು? ಅದಕ್ಕಿದ್ದ ಹಿನ್ನೆಲೆಯೇನು? ಅದರ ಪ್ರಾಚೀನತೆ ಏನು? ಇವುಗಳ ಬಗೆಗೆ ನಾವು ಇನ್ನೂ ಏನನ್ನೂ ಖಚಿತವಾಗಿ ಹೇಳಲಾಗುತ್ತಿಲ್ಲ. ಆಧಾರಗಳ ಕೊರತೆಯಿಂದಾಗಿ ಬಸವಪೂರ್ವದ ಹಿನ್ನೆಲೆಯನ್ನು ಕುರಿತು ಏನನ್ನೂ ಹೇಳಲಾಗದಂತೆ ಮೌನದ ತೆರೆಯನ್ನು ಕಾಲಪುರುಷ ಎಳೆದಿದ್ದಾನೆ.

ಬಸವಣ್ಣನವರಿಗಿಂತ ಹಿಂದೆ ಇದ್ದ ಪ್ರಖ್ಯಾತ ವೀರಶೈವ ಶರಣರಲ್ಲಿ ಕೊಂಡಗುಳಿ ಕೇಶಿರಾಜನೂ ಒಬ್ಬನು. ಸದ್ಯಕ್ಕೆ ಆದ್ಯ ವಚನಕಾರನೆಂದು ಗುರುತಿಸುವ ಜೇಡರ ದಾಸಿಮಯ್ಯನು ಕೊಂಡಗುಳಿ ಕೇಶಿರಾಜನಿಗೆ ಸಂಬಂಧಿಸಿದ ಕತೆಯೊಂದನ್ನು ತನ್ನ ವಚನವೊಂದರಲ್ಲಿ ಉಲ್ಲೇಖಿಸಿರುವನು. ಗೊಬ್ಬೂರು ಶಾಸನದಲ್ಲಿ ಬರುವ ಜೇಡರ ದಾಸಿಮಯ್ಯ ವಚನಕಾರ ಜೇಡರದಾಸಿಮಯ್ಯನೇ ಆಗಿದ್ದಲ್ಲಿ ಅವನ ಕಾಲ ಕ್ರಿ.ಶ. 1148 ಎಂದಾಗುತ್ತದೆ. ಇವನಿಗಿಂತ ಹಿಂದೆ ಇದ್ದ ಕೊಂಡಗುಳಿ ಕೇಶಿರಾಜನು ಕ್ರಿ.ಶ. 1107ರ ಬಿಜಾಪುರ ಜಿಲ್ಲೆಯ ಕೊಂಡಗುಳಿ ಶಾಸನದಲ್ಲಿ ಉಲ್ಲೇಖಿತನಾಗಿರುವನು. ಇದರಿಂದ ಕೊಂಡಗುಳಿ ಕೇಶಿರಾಜನ ಕಾಲವನ್ನು 12ನೇ ಶತಮಾನದ ಆದಿಭಾಗಕ್ಕೆ ಕೊಂಡೊಯ್ಯಬೇಕಾಗುತ್ತದೆ. "ಬಸವಾದಿ ಪ್ರಮಥ ಯುಗದ ಸೂರ್ಯೋದಯಕ್ಕೆ ಹಿನ್ನೆಲೆಯಾಗಿ ನಡೆದ ಅರುಣೋದಯ 'ಕ್ರೀಕಲಾಪ'ಗಳು ಈ ಕೇಶಿರಾಜನ ಬದುಕಿನಲ್ಲಿ, ಬರಹದಲ್ಲಿ ಒಡೆದು ಕಾಣುತ್ತವೆ. ಆದುದರಿಂದ ಈತನ ಅಭ್ಯಾಸ, ಈತನ ಕೃತಿಗಳ ಅಭ್ಯಾಸಗಳೆಂದರೆ 'ಬಸವಪೂರ್ವದ' ಅಭ್ಯಾಸವೇ ಆಗು

ತ್ತದೆ. ಬಸವಪೂರ್ವಯುಗದ ಶರಣನೂ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಅರಸನೆಯ ವಿಕ್ರಮಾದಿತ್ಯನ ಮಹಾದಂಡನಾಯಕನೂ ಆಗಿದ್ದ ಈತ ಪ್ರಬಲ ರಾಜಕಾರಣಿ, ಕವಿ, ಅನುಭಾವಿ-ಈ ತ್ರಿಕೂಟಗಳ ಸಂಗಮ. ಹರಿಹರ ಇವನ ಬದುಕು-ಸಾಹಿತ್ಯಗಳಿಂದ ಬಹಳ ಪ್ರಭಾವಿತನಾಗಿ 'ಕೇಶಿರಾಜ ದಣ್ಣಾಯಕರ ರಗಳೆ'ಎಂಬ ಕೃತಿಯನ್ನು ರಚಿಸಿರುವನು. ಇವನ ಜೀವನ ಚರಿತ್ರೆಯನ್ನು ತಿಳಿಯಲು ನಮಗಿರುವುದು ಇದೊಂದೇ ಆಧಾರ. ಹರಿಹರ ಕೊಡುವ ಜೀವನ ಚಿತ್ರವನ್ನು ಹೀಗೆ ಸಂಗ್ರಹಿಸಿ ಹೇಳಬಹುದು :

ಕೊಂಡಗುಳಿ ಎಂಬ ಪುರದಲ್ಲಿ ವಿರೂಪಾಕ್ಷನ ಭಕ್ತನೂ, ನಿಚ್ಚವೂ ಎಂಟು ಪದ್ಯವನ್ನು 'ಅಚ್ಚರಿ ಮಿಗಲ್ಕೆ' ಹೇಳುವವನೂ, ಶಂಕರ ಸ್ತೋತ್ರದಲ್ಲೇ ಬಾಳುತ್ತಿರುವವನೂ ಆದ ಕೇಶಿರಾಜನನ್ನು ಕಲ್ಯಾಣಪುರದ ಪೆರ್ಮಾಡಿರಾಯನು ತನ್ನಲ್ಲಿಗೆ ಬರಮಾಡಿಕೊಂಡು ಹಿರಿಯ ಪ್ರಧಾನಿಕೆಯನ್ನು ಅನುಗ್ರಹಿಸುವನು. 'ಮಂತ್ರಕ್ಕೆ ನೆರೆ ಕೇಶಿರಾಜ ದಣ್ಣಾಯಕರೆ, ತಂತ್ರಕ್ಕೆ ಮಿಗೆ ಕೇಶಿರಾಜ ದಣ್ಣಾಯಕರೆ' ಎನ್ನುವಂತಾಗಿ, ಶರಣರು ಬೇಡಿದ್ದನ್ನಿತ್ತು ಒಂದು ದಿವಸ ಶರಣರ ಸುಗೀತ ಗೋಷ್ಠಿಯಲ್ಲಿ ಸಂಪೂರ್ಣ ಮಗ್ನನಾಗಿ ಬಾಹ್ಯ ಪ್ರಪಂಚವನ್ನು ಮರೆತಿರಲು ಆ ಸಮಯದಲ್ಲಿ ಪೆರ್ಮಾಡಿರಾಯನ ಸೇವಕರು ಬರುವರು. ಅರಸನ ಕರೆಯನ್ನು ಕೇಳಿ, 'ಸಿರಿಯ ಸಂಗಂ ಶರಣ ಸಂಗಕ್ಕೆ ಪಗೆಯಾಯ್ತು' ಎಂದು ನೊಂದು ಸೋಮನಾಥನಲ್ಲಿ ಮೊರೆಯಿಟ್ಟು ಅರಮನೆಗೆ ಬರುವನು.

ಅಲ್ಲಿ ವಿಪ್ರರು ಪೆರ್ಮಾಡಿರಾಯನಿಗೆ ದಣ್ಣಾಯಕರು 'ವಿಷ್ಣುನಿಂದಕರೆಂದೂ, ನಿಮ್ಮನ್ನೂ ಲಕ್ಷ್ಯಕ್ಕೆ ತಂದುಕೊಳ್ಳದೆ ನಿಮಗೆಂದೂ ನಮಸ್ಕರಿಸದೆ ಕೈಯ ಬೆರಳಲ್ಲಿರುವ ಮುದ್ರಿಕೆಗೆ ನಮಸ್ಕರಿಸುವರೆಂದೂ ಚಾಡಿ ಹೇಳುವರು. ಇವರ ಮಾತನ್ನು ಪರೀಕ್ಷಿಸಲು ರಾಜನು ದಣ್ಣಾಯಕರನ್ನು ಕರೆಯಿಸುವನು. ಸರಸವಾಗಿ ಸಂಭಾಷಿಸುತ್ತ ದಣ್ಣಾಯಕರ ಬೆರಳಿನಿಂದ ಉಂಗುರವನ್ನು ತೆಗೆದು ನೂತನವಿದೆಂದು ನೋಡುವಂತೆ ನೋಡಿ, ಮನಸ್ಸಿನಲ್ಲಿ ಮುಳಿದು ತನ್ನ ಬೆರಳಿಗೆ ಅದನ್ನು ಹಾಕಿಕೊಂಡು ಸತ್ಯಾಸತ್ಯತೆಯನ್ನು ಒರೆಹಚ್ಚಿ ನೋಡಲು ಬಯಸಿ, 'ಮನೆಗೆ ಬಿಜಯಂಗೆಯ್ಯಿರೇ ದಂಡನಾಥರೇ' ಎನ್ನುವನು. ದಣ್ಣಾಯಕರು ನಮಸ್ಕರಿಸದೆ ಗಳಗಳನೆ ಹೋಗುತ್ತಿರಲು ಕೋಪಗೊಂಡ ಅರಸ ದಣ್ಣಾಯಕರನ್ನು ಚಾರರ ಮೂಲಕ ಮತ್ತೆ ಕರೆಯಿಸಿ, "ಕಂಡಿರೇ ಎನ್ನಿಂಡಮೇ ಸಂಪದಂಬಡೆದು ಅಂಡಲೆದ ದಾರಿದ್ರ್ಯವೆಲ್ಲವಂ ನೆರೆ ತೊಡೆದು ಎನಗೆ ಪೊಡಮಡದುದಾಸೀನವಮಂ ಮಾಳ್ಪರೇ..." ಎಂದು ಆಕ್ಷೇಪಿಸುವನು. ಲಿಂಗೈಕನಿಷ್ಠನಾದ ಕೇಶಿರಾಜ ಅದನ್ನು ಕೇಳಿ ಸಹಿಸಲಾರದೆ ಸೇವಕ ವೃತ್ತಿಯನ್ನು ಮನದ ಕಾಲಿಂದೊದೆದು, ಸರ್ವಸ್ವವನ್ನೂ ತೊರೆದು ಕಲ್ಯಾಣವನ್ನು ಬಿಡುವನು. ಅವನೊಡನೆ ಅವನ ಪತ್ನಿ ಗಂಗಾದೇವಿಯೂ

ನಡೆಯುವಳು. ಅವರು ಅಲ್ಲಿಂದ ಒಂದು ಯೋಜನ ದೂರದಲ್ಲಿದ್ದ ವಂಶವರ್ಧನನೆಂಬ ಬಿದಿರಕಾಯಕದ ಭಕ್ತನ ಮನೆಗೆ ಬರುವರು. ಏಳು ದಿವಸ ಶಿವಭಕ್ತಿ ಸುಖ ಪ್ರಸಂಗ ಪ್ರಸಾದ ಸಂತುಷ್ಟನಾಗಿ ಬಾಹ್ಯಪ್ರಪಂಚವನ್ನು ಮರೆತಿದ್ದ ದಣ್ಣಾಯಕರನ್ನು ಗಂಗಾದೇವಿಯು ಎಚ್ಚರಿಸಿ ಪ್ರಸಾದವನ್ನು ಕರುಣಿಸಬೇಕೆನ್ನುವಳು. ದಣ್ಣಾಯಕರ ಶಿವಾರ್ಚನೆಯ ಸಂಭ್ರಮವನ್ನು ಕೇಳಿದ ಪೆರ್ಮಾಡಿರಾಯನು ಕಾಲುನಡಿಗೆಯಿಂದ ಅಲ್ಲಿಗೆ ಬರುವನು. ತನ್ನ ತಪ್ಪನ್ನು ಕ್ಷಮಿಸುವಂತೆ ಭಕ್ತಿಯಿಂದ ಪ್ರಾರ್ಥಿಸಿ ಮತ್ತೆ ಕಲ್ಯಾಣಕ್ಕೆ ದಣ್ಣಾಯಕರನ್ನು ಕರೆದು ತರುವನು.

ಕೇಶಿರಾಜ ದಣ್ಣಾಯಕರು ಬೊಮ್ಮಣ್ಣನೆಂಬ ಭಕ್ತನ ಏಕನಿಷ್ಠೆಯ ಬಲುಹನ್ನೂ, ಉನ್ನತ ಶಿವಪ್ರಭಾವಿಭವವನ್ನೂ ಕೇಳಿ ಅವನಲ್ಲಿಗೆ ಬಂದು ಅವನು ಮನೆಯ ತುಂಬ ಮಾಂಸವಿರುವುದನ್ನು ಕಂಡು ಹೇಸಿಕೆಪಟ್ಟುಕೊಂಡು, ಅಲ್ಲಿನ ಶಿವಾಲಯದಲ್ಲಿ ದೇವರ ಪೂಜೆಗೆ ಅಣಿಮಾಡಿಕೊಂಡನು. ಬೊಮ್ಮಣ್ಣ ಬಂದು ಕರೆದಾಗ ಪೂಜೆಗೆ ಆಗಲೇ ಲಿಂಗವನ್ನು ಸ್ಥಾಪಿಸಿದ್ದೇನೆ ಎಂದು ನೆವ ಹೇಳಿ ನಿರಾಕರಿಸಿದನು. ಬೊಮ್ಮಣ್ಣನ ಪ್ರಭಾವದಿಂದ ಲಿಂಗವು ಅಲ್ಲೇ ಅಂಟಿಕೊಂಡುಬಿಟ್ಟಿತು. ಬೊಮ್ಮಣ್ಣನ ಮನೆಗೆ ಬಂದ ಕೇಶಿರಾಜ ಅವನ ಮನೆಯಲ್ಲಿ ಮಾಂಸ ತಿನ್ನಬೇಕಲ್ಲಾ ಎಂದು ಹೆದರುತ್ತಲೇ ಊಟಕ್ಕೆ ಕುಳಿತನು. ಬೊಮ್ಮಣ್ಣನ ಮಹಿಮೆಯಿಂದಾಗಿ ಮಾಂಸಾಹಾರವೆಲ್ಲಾ ಸಸ್ಯಾಹಾರವಾದುವು. ಅನಂತರ ಅವನ ಸೇವೆಯನ್ನು ಸ್ವೀಕರಿಸಿ, ಶಿವಗೋಷ್ಠಿಯಲ್ಲಿದ್ದು ಕಲ್ಯಾಣಕ್ಕೆ ಮರುಳುವರು. ಹಾಗೆ ಬರುತ್ತಿರುವಾಗ ನದಿಯೊಂದು ಅಡ್ಡವಾಯಿತು. ಅಶೋಕೆಯ ಮಾಮರದ ನೆಳಲಿನಲ್ಲಿ ಕುಳಿತು ಶಿವಾರ್ಚನೆ ಮಾಡಿ ಪಂಚಾಕ್ಷರಿ ಜಪವನ್ನೆಣಿಸುತ್ತಿರಲು ಗಗನದಲ್ಲಿ ಹಾರುತ್ತಿದ್ದ ಹದ್ದೊಂದು ಬಂದು ಅಂಗೈಯಲ್ಲಿದ್ದ ಲಿಂಗವನ್ನು ಕಚ್ಚಿ ತೆಗೆದು ಆಗಸಕ್ಕೆ ನೆಗೆದು ಲಿಂಗವನ್ನು ನದಿಯಲ್ಲಿ ಹಾಕಿತು. ಇದನ್ನು ನೋಡಿದ ದಣ್ಣಾಯರು ಭೋಂಕನೆ ಕತ್ತಿಯನ್ನು ತೆಗೆದುಕೊಂಡು ತಮ್ಮನ್ನು ತಾವೇ ಸಂಹರಿಸಿಕೊಳ್ಳಲು ಸಿದ್ಧರಾದಾಗ ಶರಣರು ಬಂದು ಆಣೆಯಿಟ್ಟು ತಡೆದು ಲಿಂಗವನ್ನು ನದಿಯಲ್ಲಿ ಹುಡುಕಿಸುವುದಾಗಿ ಹೇಳುವರು. ಶರಣರು ಆಯಾಸಗೊಳ್ಳುವುದನ್ನು ಒಪ್ಪದ ದಣ್ಣಾಯಕರು, ಹರಿಗೋಲನ್ನು ಏರಿ ಹೋಗುತ್ತ ಸೋಮನಾಥನನ್ನು ಪ್ರಾರ್ಥಿಸಲು ಲಿಂಗವು ನೆಗೆದು ಬಂದಿತು. ಬಸವಣ್ಣಗೆಯ ಪೂಜೆಯನುಳಿದು ಬಂದ, ಗಂಧಾಕ್ಷತೆ ಹೂವುಗಳನ್ನು ಬಿಟ್ಟು ಬಂದ ಲಿಂಗವನ್ನು ಕಂಡು 'ಶರಣ ಸತಿ ಮುಳಿದು ಹುರುಡಿಸುವಂತೆ' ಶಿವನ ಸ್ನೇಹವನ್ನು ಅತಿಶಯವಾಗಿಸಲು, ಲಿಂಗವನ್ನು ಮರಳಿ ನದಿಗೆ ಬಿಡಲು ಭಕ್ತನ ಏಕನಿಷ್ಠೆಗೆ ಮೆಚ್ಚಿದ ಸೋಮನಾಥನು ದಾಸಣದ ಹೂವು, ಗಂಧಾಕ್ಷತೆಗಳೊಡನೆ ಲಿಂಗವು ದಣ್ಣಾಯಕರ ಅಂಗೈಗೆ ಬಂದು ನೆಲಸುವಂತೆ ಮಾಡಿದನು. ಶರಣ ಸಮೂಹ ಈ ಪವಾಡವನ್ನು ಕಂಡು ಉತ್ಸವಿಸಿತು. ಶಿವನು ಕೈಲಾಸದಿಂದ ವಿಮಾನವೊಂದನ್ನು

ಕಳುಹಿಸಿದನು. ಅದನ್ನೇರಿ ಕೈಲಾಸಕ್ಕೆ ಬಂದ ದಣ್ಣಾಯಕರಿಗೆ ಶಿವನು ಗಣಪದವಿಯನ್ನು ಅನುಗ್ರಹಿಸುವನು.

ಹರಿಹರ ಕೊಂಡಗುಳಿ ಕೇಶಿರಾಜನ ಜೀವನದ ಪರಿಪೂರ್ಣ ಚಿತ್ರವನ್ನು ಕೊಟ್ಟಿಲ್ಲ. ಬಹುಶಃ, ಅವನಿಗೆ ತಿಳಿದದ್ದು ಸ್ವಲ್ಪವೇ ಇರಬಹುದು. ಹರಿಹರನ 'ಕೇಶಿರಾಜ ದಣ್ಣಾಯಕರ ರಗಳೆ'ಯು ವೀರಶೈವ ಧರ್ಮದ ಬಸವಪೂರ್ವಯುಗದ ಸ್ಥಿತಿಯನ್ನು ಅರಿಯಲು ಅಗತ್ಯವಾದ ವಿಷಯ ಸಾಮಗ್ರಿಯನ್ನು ಒದಗಿಸುತ್ತದೆ. ಈ ದೃಷ್ಟಿಯಿಂದ ಇದು ಮಹತ್ವದ ಕೃತಿ. ಕೇಶಿರಾಜನ ತಂದೆ ತಾಯಿಗಳ ಬಗೆಗೆಯಾಗಲೀ, ಬಾಲ್ಯ ಯೌವನಗಳ ಬಗೆಗೆಯಾಗಲೀ ರಗಳೆಯಲ್ಲಿ ನಮಗೇನೂ ತಿಳಿದು ಬರುವುದಿಲ್ಲ. ರಗಳೆಯಲ್ಲಿ, ಕಲ್ಯಾಣದ ಪೆರ್ಮಾಡಿರಾಯನಲ್ಲಿ ಕೊಂಡಗುಳಿ ಕೇಶಿರಾಜ ಮಂತ್ರಿಯಾಗಿದ್ದನೆಂಬ ವಿಷಯ ಬರುತ್ತದೆ. "ಆರನೆಯ ವಿಕ್ರಮಾದಿತ್ಯನಿಗೆ ಪೆರ್ಮಾಡಿ ಎಂಬುದು ಇನ್ನೊಂದು ಹೆಸರು. 'ತೆಲುಗು ಜೊಮ್ಮಯ್ಯನ ರಗಳೆ'ಯ ಮೇರೆಗೆ ಇವನ ರಾಣಿ ಲಕ್ಷ್ಮೀದೇವಿ ವೀರಶೈವದತ್ತ ಒಲುಮೆಯುಳ್ಳವಳು"[2]. ಹರಿಹರನ ಪ್ರಕಾರ ಶರಣ ವಂಶವರ್ಧನ ಹಾಗೂ ಜೊಮ್ಮಯ್ಯ ಕೊಂಡಗುಳಿ ಕೇಶಿರಾಜನ ಸಮಕಾಲೀನರು. ವಂಶವರ್ಧನನ ಬಗೆಗೆ ಹೆಚ್ಚಿಗೆ ಏನೂ ತಿಳಿದು ಬಂದಿಲ್ಲ. ತೆಲುಗು ಜೊಮ್ಮಯ್ಯನು ವಚನಕಾರನಾಗಿದ್ದು 'ತೆಲುಗೇಶ್ವರಾ' ಎಂಬ ಅಂಕಿತದ ಒಂದು ವಚನ ಲಭಿಸಿದೆ.[3] ಜೇಡರ ದಾಸಿಮಯ್ಯನು ಕೇಶಿರಾಜನ ಬದುಕಿಗೆ ಸಂಬಂಧಿಸಿದ ಪ್ರಸಂಗವೊಂದನ್ನು ತನ್ನ ವಚನವೊಂದರಲ್ಲಿ[4] ನೆನೆದಿರುವನು :

> ನೆರೆ ನಂಬಿ ಕರೆದಡೆ ನರಿ ಕುದುರೆಯಾಗಿ ಹರಿಯವೆ ?
> ಜಗವೆಲ್ಲವರಿಯಲು ತೊರೆಯೊಳಗೆ ಬಿದ್ದ ಲಿಂಗ
> ಕರೆದಡೆ ಬಂದುದು ಕರಸ್ಥಲಕ್ಕೆ
> ನಂಬದೆ ಕರೆದವರ ಹಂಬಲನೊಲ್ಲ ನಮ್ಮ ರಾಮನಾಥ

ತೊರೆಯಲ್ಲಿ ಬಿದ್ದ ಲಿಂಗ ಕೇಶಿರಾಜನ ನಿಷ್ಠಾಪೂರ್ಣ ಭಕ್ತಿಯಿಂದಾಗಿ ಮತ್ತೆ ಅದು ಅವನ ಅಂಗೈಯಲ್ಲಿ ಬಂದು ಸೇರಿತು. ಈ ಪವಾಡ ಪ್ರಸಂಗವನ್ನು ಹರಿಹರನೂ ಹೇಳಿರುವನು. ಕೇಶಿರಾಜನು ನಿತ್ಯವೂ ಎಂಟು ಪದ್ಯಗಳನ್ನು ಬರೆದು ಶಿವನಿಗೆ ಅರ್ಪಿಸುತ್ತಿದ್ದನೆಂಬ ವಿಷಯ ಹರಿಹರನಿಂದ ತಿಳಿದುಬರುತ್ತದೆ :

> "ಆನಂದ ಜಲದೊಡನೆ ಅಟ್ಟಹಾಸಂ ನಿಮಿರೆ
> ಏನೆಂಬೆನುಬ್ಬರದ ಭಕ್ತಿ ಚಿತ್ತಮನಡರೆ
> ಸಿಚ್ಚಲೆಂಟುಂ ಪದ್ಯಮಂ ಸೋಮನಾಥಂಗೆ
> ಅಚ್ಚರಿ ಮಿಗಲ್ಕೆ ಪೇಳ್ವಂ ಶೈವನಾಥಂಗೆ
> ಪಂಚಾಕ್ಷರಾನುಬಂಧಂ ಛಂದವನುವಾಗೆ
> ಪಂಚಮುಖನಾಮದಭಿಧಾನ ಬುದ್ಧಿಯದಾಗೆ
> ಶಿವವಾಕ್ಯ ಶಬ್ದ ಶುದ್ಧಿ ವ್ಯಾಕರಣಮಾಗೆ
> ಶಿವಭಕ್ತಿ ವೃತ್ತಕ್ಕಲಂಕಾರದಂತಾಗೆ

ಪದ್ಯಂಗಳಂ ಶಿವಂಗನುದಿನಂ ಪೇಳುತಂ
ಚೋದ್ಯವೆನೆ ಶಂಕರಸ್ತೋತ್ರದೊಳೆ ಬಾಳುತಂ"[5]

ಕೇಶಿರಾಜ ಬಸವಪೂರ್ವಯುಗದ ಮಹಾ ಅನುಭಾವಿ ; ಭಕ್ತರ ವೃತ್ತಿ ಹಾಗೂ ಜಾತಿಗಳನ್ನು ನೋಡದೆ ಶಿವನ ಸದ್ಭಕ್ತರು ಶಿವನ ಅಂಶವೆಂದೇ ಭಾವಿಸಿ ಅವರೊಡನೆ ಬೆರೆತು 'ಶಿವಗೋಷ್ಠಿ' ನಡೆಸುತ್ತಿದ್ದ ಮಹಾನುಭಾವ. ವಂಶವರ್ಧನನೆಂಬ ಭಕ್ತನಲ್ಲಿಗೆ ಬಂದು ಅವನಲ್ಲಿ ಕೆಲದಿವಸ ತಂಗಿ ಶಿವಗೋಷ್ಠಿಯಲ್ಲಿ ಮೈಮರೆತ 'ಅನುಭಾವಿ' ಕೇಶಿರಾಜನ ಸೊಗಸಾದ ಚಿತ್ರವನ್ನು ಹರಿಹರ ತನ್ನ ರಗಳೆಯಲ್ಲಿ ಹೀಗೆ ಕೊಟ್ಟಿರುವನು : "ಮಾತುಮಾತಿಂ ಪುರಾತನರ ಗೀತವಂಕುರಿಸೆ ನಿರ್ಮಳ ಚಿತ್ತಂ ನಿಮಿರ್ದು ನಿಡುಸುಯ್ಯೆ ಬೆಳೆದು ಶಾಂತಿ ಪಲ್ಲವಿಸೆ ಸತ್ಯಂ ಪೂತು ಪರಿಣಾಮಮಂ ಫಲಿತವಾಗಿ ಸಮಸುಖಿ ಸಂಗದೊಳ್ಗೆಲ್ಲಕ್ಕೆ ಹೋರದೆ ತರ್ಕಕ್ಕೆ ತಲೆಯೆತ್ತದೆ ಆಸೆಗೆ ಘಾಸಿಯಾಗದೆ ಮತ್ಸರಕ್ಕೆ ಮಲೆಯದೆ ಗೀತಕ್ಕೊಮ್ಮೊಮ್ಮೆ ಪೊಡೆವಡುತೆ ಉಘೆಯಕ್ಕೊಮ್ಮೆ ಉರ್ಬುತ್ತೆ ಭೋಗಕ್ಕಾನಂದಾಶ್ರುವಂ ಸುರಿಸುತ್ತಿರೆ ಭಕ್ತಿಭರಂ ಮುಂದ್ವೈಸಿದ ಸಂಗದಿಂ ಮುಂದುಗೆಟ್ಟು ಮೇರೆಗೆಟ್ಟೋರಂತೆ ಹಾರೈಸಿ ಹಬ್ಬಿ ಬೆಳೆದಂ ಶಿವ ಮರುಳ್ಗೊಂಡು ಜೇನ ಸೊನೆಯೊಳ್ಮಿಂಡಂತೆ ಇರುಳ್ ಪಗಲುಮನರಿಯದೆ ನಿದ್ರೆ ಪಸಿವಂ ಮರೆದು ತಮ್ಮಿಷ್ಟಲಿಂಗಕ್ಕಾನಂದರಸದ ಮಜ್ಜನಂ ಪುಳಕದ ಪೂಜೆ ನಿಜ ಶ್ವಾಸಮೆ ಪರಿಮಳಧೂಪಂ ಗೀತದಾರತಿ ಗೋಷ್ಠಿಯಾರೋಗಣೆಯಾಗಿ ಶಿವಭಕ್ತಿ ಸುಖಪ್ರಸಂಗಪ್ರಸಾದ ಸಂತುಷ್ಟರಾಗಿರ್ದಲ್ಲಿ......"[6]

ಹರಿಹರನ ಈ ಚಿತ್ರ ವಾಸ್ತವವಾದುದು. ಕೇಶಿರಾಜನ 'ಮಂತ್ರಮಹತ್ವದ ಕಂದ' ಹಾಗೂ 'ಲಿಂಗ ಸ್ತೋತ್ರದ ಕಂದ'ಗಳು ಅವನ ಭಕ್ತಿಮಯ ಜೀವನದ ಚಿತ್ರವನ್ನು ಇನ್ನಷ್ಟು ಚೆನ್ನಾಗಿ ಪರಿಚಯಿಸುತ್ತವೆ. 'ಲಿಂಗಸ್ತೋತ್ರದ ಕಂದ'ದ ಬಹುತೇಕ ಪದ್ಯಗಳು ಅವನ ಉಜ್ವಲವಾದ ಭಕ್ತಿಯನ್ನೂ, ಅವನ ಪರವಶ ಸ್ಥಿತಿಯನ್ನೂ ಭಕ್ತಿಯ ಕಾರಣವಾಗಿ ಅವನು ತಳೆದ ದಶವಿಧ ಅವಸ್ಥೆಯನ್ನೂ ಚಿತ್ರವತ್ತಾಗಿ ನಿರೂಪಿಸುತ್ತವೆ. ಬಿದಿರಕಾಯಕದ ಶಿವಭಕ್ತ ವಂಶವರ್ಧನನ ಮನೆಯಲ್ಲಿ ಏಳು ದಿವಸ ಪರ್ಯಂತ ಶಿವಭಕ್ತ ಸುಖಪ್ರಸಂಗ ಪ್ರಸಾದ ಸಂತುಷ್ಟನಾಗಿ ಮೈಮರೆತಿದ್ದ ಇವನ ಭಕ್ತಿಯ ಚಿತ್ರವನ್ನು ಹರಿಹರ ಚೆನ್ನಾಗಿ ಬಿಡಿಸಿರುವನು. ಕವಿಚರಿತೆಕಾರರು ಈತನು ವಚನಗಳನ್ನೂ ಬರೆದಿರುವಂತೆ ತಿಳಿಯುತ್ತದೆ[7] ಎಂದಿರುವರು. ಅವರಿಗೆ ಈತನ ವಚನಗಳು ದೊರೆತಿಲ್ಲ. ಹರಿಹರನ ರಗಳೆಯಲ್ಲಿ ಬರುವ '...ಗೀತಕ್ಕೊಮ್ಮೊಮ್ಮೆ ಪೊಡೆವಡುತೆ...' 'ಸೌರಾಷ್ಟ್ರದೊಡೆಯ ಸೋಮೇಶ ತಂದೆ ಸೋಮನಾಥಾ ಸೊಡ್ಡಳಕ ಪ್ರಭುವೇ'—ಈ ಮಾತುಗಳ ಭಾವವನ್ನು ಗಮನಿಸಿದಾಗ ಈತ ವಚನಕಾರನಾಗಿದ್ದಿರಬಹುದು, ಈತನ ಅಂಕಿತ 'ಸೋಮನಾಥ ಸೊಡ್ಡಳಕಪ್ರಭುವೇ' ಎಂದಿರಬಹುದು ಎಂಬ ಊಹೆಗೆ ಅವಕಾಶವಿದೆ.

ಕೊಂಡಗುಳಿ ಕೇಶಿರಾಜನ ಉಪಲಬ್ಧ ಕೃತಿಗಳು ಸದ್ಯಕ್ಕೆ ಐದು – ಮಂತ್ರ ಮಹತ್ವದ ಕಂದ, ಲಿಂಗಸ್ತೋತ್ರದ ಕಂದ – 1, ಲಿಂಗಸ್ತೋತ್ರದ ಕಂದ – 2, ಶೀಲ ಮಹತ್ವದ ಕಂದ ಹಾಗೂ ನವರತ್ನಮಾಲಾ.8 ಇವುಗಳಲ್ಲದೆ ಇನ್ನೂ ಹಲವು ಕೃತಿಗಳನ್ನು ಬರೆದಿರಬಹುದು. ಶಾಂತಲಿಂಗದೇಶಿಕನು "ಶಿವಪೂಜೆಯಂ ಮಾಡುವಾಗ ಕಂದ, ವೃತ್ತ, ಗ್ರಂಥ, ತ್ರಿವಿಧಿ, ರಗಳೆ, ವಚನ, ಪದ, ಪದ್ಯ, ಗದ್ಯ, ದಂಡಕ, ಅಷ್ಟಕ ಇವು ಮೊದಲಾದವರಿಂದ ಲಿಂಗವ ದಿನಂಪ್ರತಿಯಲ್ಲಿ..." ಪೂಜಿಸುತ್ತಿದ್ದ ಎಂದು ಹೇಳಿ ಕೇಶಿರಾಜನ ವೈವಿಧ್ಯಮಯವಾದ ಸಾಹಿತ್ಯ ಸೃಷ್ಟಿಯನ್ನು ಪ್ರಸ್ತಾಪಿಸಿರುವನು.

ಹರಿಹರನ ಬಸವರಾಜದೇವರ ರಗಳೆ, ಕೊಂಡಗುಳಿ ಕೇಶಿರಾಜ ದಣ್ಣಾಯಕರ ರಗಳೆ, ತೆಲುಗು ಬೊಮ್ಮಯ್ಯನ ರಗಳೆ, ಕೆಂಭಾವಿ ಭೋಗಣ್ಣನ ರಗಳೆ, ಮಾದಾರ ಚೆನ್ನಯ್ಯನ ರಗಳೆ, ಶಂಕರದಾಸಿಮಯ್ಯನ ರಗಳೆ – ಇವುಗಳನ್ನು ಆಧರಿಸಿ ಬಸವಣ್ಣ ಮೊದಲಾದವರ ವೀರಶೈವ ಧರ್ಮದ ಪೂರ್ವರೂಪವನ್ನು ರೇಖಿಸುವ ಪ್ರಯತ್ನವನ್ನು ಡಾ॥ ಎಂ. ಚಿದಾನಂದಮೂರ್ತಿಯವರು ಮಾಡಿರುವರು.9 ಅವರ ನಿಲುವನ್ನು ಹೀಗೆ ಸಂಗ್ರಹಿಸಿ ಹೇಳಬಹುದು :

1 ಯಾವ ಜಾತಿಯವರೇ ಆಗಿರಲಿ, ವೃತ್ತಿಯವರೇ ಆಗಿರಲಿ ಬಯಸಿದರೆ ದೇವಾಲಯದಲ್ಲಿ ಲಿಂಗದೀಕ್ಷೆಯನ್ನು ಪಡೆದು ಶಿವಭಕ್ತರಾಗಬಹುದು. ಹೆಸರನ್ನು ಬದಲಿಸಿಕೊಳ್ಳಬಹುದು.

2 ಅವರದು ಶಿವನ ಬಗ್ಗೆ ನೈಷ್ಠಿಕವಾದ ಭಕ್ತಿ. ಶಿವನೊಬ್ಬನೇ ದೈವವೆಂದು ನಂಬಿದ್ದರಿಂದ ಉಳಿದ ದೈವಗಳನ್ನು ಕ್ಷುದ್ರ ದೈವಗಳೆಂದು ಹೀನವಾಗಿ ಕಾಣುತ್ತಿದ್ದರು.

3 ಶಿವಭಕ್ತಿಗೆ ರಾಜಭಕ್ತಿ ಅಡ್ಡಿ ಎಂದು ತಿಳಿದಿದ್ದರು. ರಾಜತ್ವವನ್ನು ಸ್ಪಷ್ಟವಾಗಿ ಪ್ರತಿಭಟಿಸಿರುವರು. ಬೆರಳ ಮುದ್ರಿಕೆಯು ಶಿವಲಾಂಛನಕ್ಕೆ ವಂದಿಸುತ್ತಿದ್ದರೇ ಹೊರತು ರಾಜನಿಗೆ ವಂದಿಸುತ್ತಿರಲಿಲ್ಲ. ಹೊಲೆಯರನ್ನು ಮನೆಗೆ ಹೊಗಿಸಬಾರದೆಂಬ ರಾಜನ ಎಚ್ಚರಿಕೆಯನ್ನೂ (ಭೋಗಣ್ಣನ ಕಥೆ) ನಿರ್ಲಕ್ಷಿಸುವ ಸ್ಥೈರ್ಯ. ಶಿವದ್ರೋಹವಾದರೆ ಹಿಂಸೆಗೂ ಹಿಂಜರಿಯುತ್ತಿರಲಿಲ್ಲ. (ತೆಲುಗು ಜೊಮ್ಮಣ್ಣನ ಕಥೆ).

4 ಭಕ್ತರಲ್ಲಿ ಯಾವುದೇ ಅಸಮಾನತೆಯನ್ನಾಗಲೀ ಜಾತಿಭೇದವನ್ನಾಗಲೀ ಮಾಡುತ್ತಿರಲಿಲ್ಲ. ಕರ್ಮಪ್ರಧಾನವಾದ (ritualistic) ಬ್ರಾಹ್ಮಣ್ಯದ ಬಗ್ಗೆ ಮತ್ತು ಬ್ರಾಹ್ಮಣರ ಬಗ್ಗೆ ತಿರಸ್ಕಾರ. ಬಹುತೇಕ ಎಲ್ಲ ಕಥೆಗಳಲ್ಲೂ ಬಡವರ ವಿಷಯವಿದೆ–ಶ್ರೀಮಂತಿಕೆಯನ್ನು ಎಲ್ಲೂ ಉಜ್ವಲಗೊಳಿಸಿ ಮಾತಾಡಿಲ್ಲ.

5 ಮಾಂಸಾಹಾರದ ಬಗ್ಗೆ ಅಷ್ಟು ಕಟ್ಟುನಿಟ್ಟಾದ ವಿಧಿ ನಿಷೇಧಗಳಿಲ್ಲ. ಶಿವಭಕ್ತರಲ್ಲಿ ಮಾಂಸಾಹಾರಿಗಳೂ ಇದ್ದರು (ತೆಲುಗು ಜೊಮ್ಮಯ್ಯ), ಸಸ್ಯಾಹಾರಿಗಳೂ ಇದ್ದರು.

6 ಶಿವನನ್ನು ಇಷ್ಟಲಿಂಗ ಹಾಗೂ ಸ್ಥಾವರಲಿಂಗ ಎರಡೂ ರೂಪಗಳಲ್ಲಿ ಪೂಜಿಸುತ್ತಿದ್ದರು – ಕೊರಳಲ್ಲಿ ಕಟ್ಟಿಕೊಳ್ಳುತ್ತಿದ್ದ ಲಿಂಗವನ್ನು ಅಂಗೈಯಲ್ಲಿಟ್ಟು ಇಲ್ಲವೆ ಪೀಠದ ಮೇಲಿಟ್ಟು ಪೂಜಿಸುತ್ತಿದ್ದರು.

7 ವೃತ್ತಿಯಲ್ಲಿದ್ದವರು – ತಾವು ತಮ್ಮ ಒಡೆಯರಿಗೆ ಜೋಳವಾಳಿಗಳೆಂದೂ, ಆದರೆ ಶಿವನಿಗೆ ಮಾತ್ರ ವೇಳೆವಾಳಿಗಳೆಂದೂ ಭಾವಿಸುತ್ತಿದ್ದರು (ತೆಲುಗು ಜೊಮ್ಮಯ್ಯ). ಕೊರಳಲ್ಲಿ ಇಲ್ಲವೆ ಎದೆಯ ಮೇಲೆ ಧರಿಸಿರುವ ಲಿಂಗವು ಕಳೆದು ಹೋದರೆ ಮತ್ತು ಹುಡುಕಿಯೂ ಸಿಗದಿದ್ದರೆ ಶಿವಭಕ್ತ ಆತ್ಮಹತ್ಯೆ ಮಾಡಿಕೊಳ್ಳುವುದನ್ನು ಆಗಿನ ಶೈವ ಸಮಾಜವು ಒಪ್ಪಿಕೊಂಡಿತ್ತು (ಕೊಂಡಗುಳಿ ಕೇಶಿರಾಜನ ಕಥೆ). ಅದು ಒಂದು ವಿಧಿಯೂ ಆಗಿರಬಹುದು.

8 ಶಿವಭಕ್ತರನ್ನು 'ಮಾಹೇಶ್ವರ'ರೆಂದು ಕರೆಯುತ್ತಿದ್ದರು. (ಗಣ, ಶರಣ ಇವು ಇದರ ಸಮಾನಾರ್ಥಕಗಳು). ಇವರೇ ವಿಶೇಷವಾಗಿ ವಾಸಿಸುತ್ತಿದ್ದ ಬಹುಶಃ ಊರಿನ ಬಡಾವಣೆಗಳು, 'ಶಿವಪುರಗಳು'. ಒಬ್ಬ ಭಕ್ತ ಉಳಿದ ಭಕ್ತರ ಜೊತೆ ಸೇರಿ ಶಿವಗೋಷ್ಠಿಗಳನ್ನು ನಡೆಸುವುದು, ತನ್ನ ಸಂಪತ್ತನ್ನು ಹಂಚಿಕೊಳ್ಳುವುದು ಧರ್ಮಾಚರಣೆಯ ಒಂದು ಮುಖ್ಯ ಭಾಗವಾಗಿದ್ದಿತು. ಶಿವನಷ್ಟೇ ಅಥವಾ ಶಿವನಿಗಿಂತಲೂ ಶಿವಭಕ್ತ ದೊಡ್ಡವನು ಎಂಬ ನಂಬಿಕೆಯೂ ಇತ್ತು.

ಕೊಂಡಗುಳಿ ಕೇಶಿರಾಜನು ಬಸವ ಪೂರ್ವಯುಗದ ಶರಣನಾಗಿದ್ದು, ಅವನ ಕೃತಿಗಳ ಮೂಲಕ ಅವನ ಕಾಲದ ವೀರಶೈವ ಧರ್ಮದ ಸ್ಥಿತಿಗತಿಗಳನ್ನು ತಿಳಿಯಬಹುದಾಗಿದೆ. ಪ್ರಧಾನವಾಗಿ ಕೇಶಿರಾಜನು ಭಕ್ತ ಕವಿ. ಧಾರ್ಮಿಕ ವಲಯದಲ್ಲೇ ಸದಾ ವಿಹರಿಸುವ ಅವನ ಮನಸ್ಸು ತನ್ನ ಧರ್ಮದ ಪ್ರಚಲಿತ ತತ್ತ್ವಗಳ ಬಗೆಗೆ ವಿಚಾರ ಮಾಡಿದೆ. ಶೈವಧರ್ಮದಿಂದ ಭಿನ್ನವಾಗಿ ನಿಂತು ತನ್ನ ತಾತ್ತ್ವಿಕ ನಿಲವುಗಳನ್ನು ಭದ್ರ ನೆಲೆಯಲ್ಲಿ ರೂಪಿಸ ಹೊರಟಿದ್ದ, ಸಾಮಾಜಿಕ ಪರಿಸರದಲ್ಲಿ ತನ್ನ ಆಚಾರ ಸಂಹಿತೆಯನ್ನು ಒಂದು ಸ್ಪಷ್ಟ ಆಕಾರಕ್ಕೆ ಹೊಂದಿಸುತ್ತಿದ್ದ ವೀರಶೈವ ಧರ್ಮವನ್ನು ವ್ಯಾಪಕವಾಗಿ ಹರಡಲು, ಜನಸಾಮಾನ್ಯರ ಬಳಿಗೆ ಅದನ್ನು ಕೊಂಡೊಯ್ಯಲು ತನ್ನ ಕೃತಿಗಳನ್ನು ಕೇಶಿರಾಜ ಮಾಧ್ಯಮವನ್ನಾಗಿ ಬಳಸಿದಂತಿದೆ.

ವೀರಶೈವ ಧರ್ಮದಲ್ಲಿ ಪ್ರಧಾನವಾದುದು ಭಕ್ತಿ. ದೇವನಿಗೂ ಜೀವನಿಗೂ ಮಧುರ ಸಂಬಂಧವನ್ನು ಭಕ್ತಿ ಉಂಟುಮಾಡಿರುವ ಕಾರಣ, ದೇವನನ್ನು ಕಾಣಲು ಭಕ್ತಿಯೇ ಸಾಧನವಾಗಿರುವ ಕಾರಣ ಇಲ್ಲಿ ಭಕ್ತಿಗೆ ಹೆಚ್ಚಿನ ಪ್ರಾಶಸ್ತ್ಯ. ಲೌಕಿಕದ ನೆಲೆಯಲ್ಲಿ ಸದಾ ಸುಖಾಪೇಕ್ಷಿಯಾಗಿ ಅದನ್ನರಸುತ್ತಾ ವಿಹರಿಸುತ್ತಿರುವ ಮನಸ್ಸನ್ನು ಅದರ ಕ್ಷಣಿಕ ನೆಲೆಯಿಂದ ಅಕ್ಷಯ ಸುಖದ ಎಡೆಗೆ ತಿರುಗಿಸುವ ಮಹಾಮಂತ್ರ ಷಡಕ್ಷರ ಮಂತ್ರ. ಈ ಆರಕ್ಕರದ ಮಂತ್ರ ಮುಕ್ಕಣ್ಣ ಶಿವನಿಗಿಂತಲೂ ಮಿಗಿಲು. ಇದಕ್ಕಿಂತ ಮಿಗಿಲಾದ ದೈವ ಭುವಿಯಲ್ಲಿ ಮತ್ತೊಂದಿಲ್ಲವೆಂಬುದನ್ನು ಕೇಶಿರಾಜ ಸಾರಲು ತನ್ನ ಕೃತಿಯಾದ 'ಮಂತ್ರ ಮಹತ್ವದ ಕಂದ'ದಲ್ಲಿ ಪ್ರಯತ್ನಿಸಿರುವನು. ಭಕ್ತರ ಮನಸ್ಸಿಗೆ ಮುಟ್ಟುವಂತೆ ಪಂಚಾಕ್ಷರಿ ಮಂತ್ರದ ಮಹತ್ವವನ್ನೂ, ಮಹಿಮೆಯನ್ನೂ ಒಂದುನೂರ ಹತ್ತು ಕಂದಗಳಲ್ಲಿ ಬಗೆ ಬಗೆಯಾಗಿ ನಿರೂಪಿಸಿ, ಗುರುತರವೂ ವೇದಾದಿ ಸಾರವೂ ಮುರಹರನ ಮೂಲನಿಧಿಯೂ ಆದ 'ಓಂ ನಮಃ ಶಿವಾಯ' ಎಂಬ ಮಂತ್ರವು ಶಿವಭಕ್ತಿ, ಶಿವನ ಕೀರ್ತನೆ, ಶಿವನ ಸ್ತುತಿ, ಶಿವನ ಮಂತ್ರ, ಶಿವನಪೂಜೆ, ಸದಾಶಿವನ ಒಲವು–ಹೀಗೆ ಸಕಲವನ್ನೂ ಒಳಗೊಂಡಿದೆ, ಅಷ್ಟೇ ಅಲ್ಲ, ಅದು ಶಿವನ ಬಳಿಗೂ ನಮ್ಮನ್ನು ಕರೆದೊಯ್ಯುತ್ತದೆ ಎಂದು ಭಕ್ತರ ಮನದಲ್ಲಿ ಆಸೆಯ ಬೀಜವನ್ನೂ ಬಿತ್ತಿರುವನು, ಭಕ್ತರ ಬದುಕಿನ ಎಲ್ಲ ಕಷ್ಟ–ಸುಖಗಳಿಗೆ ಪರಿಹಾರ ಸೂತ್ರವಾಗಿ ಈ ತಾರಕ ಮಂತ್ರ ಕಾರ್ಯ ನಿರ್ವಹಿಸುತ್ತದೆಂಬುದು ಕೊಂಡಗುಳಿ ಕೇಶಿರಾಜನ ದೃಢ ನಿಲವು. ಶಿವನ ಭಕ್ತರ ಪಾಲಿಗೆ ಇದು ನಿತ್ಯ ಜಪವಾಗಬೇಕು; ಅವರ ದೈನಂದಿನ ಬದುಕಿನಲ್ಲಿ ಉಸಿರಾಗಬೇಕು. ಈ ಸಾತ್ವಿಕ ಉದ್ದೇಶದ ಹಿಂದಿರುವ ಕಳಕಳಿಯನ್ನು ಸಮಕಾಲೀನ ಭಕ್ತ ಜನ ಅರ್ಥಮಾಡಿಕೊಂಡಂತೆ ಮುಂದೆ ಬಂದ ಶರಣ ಪೀಳಿಗೆಯೂ ಗ್ರಹಿಸಿದಂತಿದೆ. ಎಲ್ಲ ಶರಣರೂ ಮಂತ್ರ ಮಹಿಮೆಯನ್ನು ತಮ್ಮ ವಚನಗಳಲ್ಲಿ ವಿಶೇಷಿಸಿ ಹೇಳಿರುವರು.

ಲಿಂಗವಂತರಿಗೆ ಲಿಂಗಮಹತ್ವವನ್ನು ತಿಳಿಯಪಡಿಸುವ ಕೃತಿಗಳು ಲಿಂಗ ಸ್ತೋತ್ರದ ಕಂದ: 1 ಮತ್ತು 2* ದೇವ ಹಾಗೂ ಭಕ್ತನ ನಡುವಣ ಪವಿತ್ರ ಹಾಗೂ ಆತ್ಮೀಯ ಸಂಬಂಧವನ್ನೂ, ತನ್ನ ಆರಾಧ್ಯ ಮೂರ್ತಿಯ ಸಾಮೀಪ್ಯದಲ್ಲಿ ಭಕ್ತನ ಅಂತರಂಗ ಸುಖಿಸುವ ರೀತಿಯನ್ನೂ, ತನ್ನ ನೆಚ್ಚಿನ ದೈವವನ್ನು ನೋಡಿ ಸುಖಿಸುವ, ಪೂಜಿಸಿ ಆನಂದಿಸುವ, ಸ್ತುತಿಸಿ ದಣಿಯದ, ನಲಿದು ಒಲಿದು ಆಡಿ ಆಯಾಸಗೊಳ್ಳದ, ಹೃದಯದ ಸ್ವಾಮಿಯ ಮೂರ್ತಿಯನ್ನು ಕಂಡು ಕಂಡು ರೋಮಾಂಚನಗೊಳ್ಳುವ, ಸುಖದ ಮಧುರ ಕಂಪನದಿಂದ ಮೈಯೆಲ್ಲ ನಡುಗಿ

* ಈ ಕೃತಿಗಳ ಹಾಗೂ ಮುಂದೆ ಹೇಳಲಿರುವ 'ಶೀಲಮಹತ್ವದ ಕಂದ' ಇವುಗಳಲ್ಲಿನ ಉದಾಹೃತ ಪದ್ಯ ಅಥವಾ ಪದ್ಯಭಾಗಗಳು ಡಾ॥ ಎಂ. ಎಂ. ಕಲ್ಬುರ್ಗಿಯವರಿಂದ ಸಂಪಾದಿತವಾಗಿರುವ 'ಕೊಂಡಗುಳಿ ಕೇಶಿರಾಜನ ಕೃತಿಗಳು' ಎಂಬ ಗ್ರಂಥದ್ದು.

ಮೂರ್ಛೆಹೋಗುವ ಭಕ್ತನ ದಶಾವಸ್ಥೆಯಲ್ಲಿನ (ಭಕ್ತನ) ಅಂತರಂಗದ ಸಂವೇದನೆಯನ್ನೂ ಸೂಕ್ಷ್ಮಭಾವಗಳನ್ನೂ ಶಬ್ದಗಳಲ್ಲಿ ನಿರೂಪಿಸುವುದು ಸಾಮಾನ್ಯನಿಗೆ ಸಾಧ್ಯವಿಲ್ಲ, ಭಕ್ತಿಕಂಪಿತನಾದ, ಆರ್ದ್ರಮನದ ಮಹಾನ್ ಭಕ್ತನಿಗೆ ಮಾತ್ರ ಸಾಧ್ಯ.

ಬರೆತಂತಿರೆ ಬೈತಂತಿರೆ
ಕರುವಿಟ್ಟಂತಿರೆ ಜಗುಟ್ಟು ನಾಂದಂತಿರೆ ಕಂ
ಡರಿಸಿರ್ದಂತಿರೆ ಬೆಚ್ಚಂ
ತಿರೆ ರಮಯಿಕ್ಕೆನ್ನ ಮನದೊಳಭವ [ಪ]ದಂಗಳ್ ॥30॥

ನೋಡಿ ನಲಿನೆಲಿದು ಭಕ್ತಿಯೊ
ಳಾಡಿ ಮನಂ ಬೆರಸಿ ಪಾಡಿ ಮೃಡನೊಳ್ಚಿತ್ತಂ
ಗೂಡಿ ಸುಖಜಲಧಿಯೊಳ್ಮುಳು
ಗಾಡಿ ಕರಂ ಲೀಲೆಯಿಂದಮೆಂದಿರ್ದಪೆನೋ ॥32॥

ಕಡೆಗೋಡಿವಱಿಯೆ ಕಣ್ಬನಿ
ನುಡಿ ತಡಬಡವಾಗೆ ರೋಮಕೂಪದೊಳೆಲ್ಲಂ
ಬಿಡದೊಗೆಯೆ ಪುಳಕವಾಯೆ
ನ್ನೊಡೆಯನ ಮುಂದಱಿಯದಾಡುತೆಂದಿರ್ದಪೆನೋ ॥37॥

ಉಟ್ಟುದು ಪೊದೆದುದು ಮೆಲ್ದುದು
ತೊಟ್ಟುದು ತೊಡವೆಲ್ಲವರಸು ಲಿಂಗದ ಬಸಿಱೊ
ಳ್ಪುಟ್ಟಿ ಬಳೆದಂತೆ ಕಣ್ಮನ
ಕಿಟ್ಟಣವಾಗಿರ್ಪ ಸುಖಮದೆಂದಾದಪುದೋ ॥59॥

ತಡವರಿಸಿ ನೋಡಿ ಕಂಡಾ
ಮೃಡನಿರ್ದಪನೆಂಬ ಭಾವವೆನ್ನೊಳ್ನೆಲಸ
ಲ್ದುಗುಡುಗುಡನೆ ಸುರಿವ ಕಂಬನಿ
ಮಡುಗಳೊಳೋಲಾಡುತಾನದೆಂದಿರ್ದಪೆನೋ ॥70॥

ಅಂಗೈಯೊಳಾಲಿಕಲ್ಲುಂ
ಪಿಂಗದೆ ನಡೆ ನೋಡೆ ನೋಡೆ ಕರಗುವ ತೆಱದಿಂ
ಲಿಂಗವನೆ ನೋಡಿ ಮತ್ಸ
ರ್ವಾಂಗಂ ನೆಱೆ ಕರಗಿ ಕೊಱಗುತೆಂದಿರ್ದಪೆನೋ ॥72॥

ಒಂದು ಮನಱಿಯದೆ ಶಿವಶಿವ
ಯೆಂದೆಂದುಂ ಜೋಲ್ದು ಜೋಲ್ದು ಶಿವಪೂಜೆಯೊಳಾಂ
ಬಂದುದ ಪೋದುದನಱಿಯದೆ
ನಿಂದು ಮನಂ ಲಿಂಗದೊಳಗದೆಂದಾದಪುದೋ ॥99॥

ಮೇಲಿನ ಪದ್ಯಗಳು ಭಕ್ತನ ಮನದ ಹಲವು ಅವಸ್ಥೆಗಳನ್ನೂ, ತುಡಿತ ಮಿಡಿತಗಳನ್ನೂ ಮನದಾಳದ ಹಂಬಲಿಕೆಯನ್ನೂ ಚೆನ್ನಾಗಿ ನಿರೂಪಿಸುತ್ತವೆ. ಕೊಂಡಗುಳಿ ಕೇಶಿ

ರಾಜನ ಉತ್ಕಟವಾದ ಭಕ್ತಿಗೆ ಮೇಲಿನ ಕೆಲವು ಪದ್ಯಗಳು ನಿದರ್ಶನವಷ್ಟೆ. ಶಿವನ ಪೂಜೆ, ಶಿವನ ಸೇವೆ, ಶಿವನ ತತ್ತ್ವವಿಚಾರ, ಶಿವನ ನಿಜಗುಣದ ನಾಮಸ್ತವವನ್ನು ಮಾಡಹೊರಟ ತನ್ನ ಸಮಕಾಲೀನರಿಗೆ ನಿಷ್ಕಾಮವಂತ ಶುದ್ಧಭಕ್ತಿ ಹೇಗಿರಬೇಕೆಂಬುದನ್ನು ತಿಳಿಯಪಡಿಸಲು, ಭಕ್ತಿಯ ಆಚರಣೆ ಯಾವ ರೀತಿಯಲ್ಲಿರಬೇಕೆಂಬುದನ್ನು ಬೋಧಿಸಲು ಬಹುಶಃ ಕೇಶಿರಾಜನು ಇವುಗಳನ್ನು ರಚಿಸಿರಬಹುದೇನೋ !

ವೀರಶೈವ ಧರ್ಮ ಬಸವಾದಿ ಶಿವಶರಣರ ಅನುಭವ ಗೋಷ್ಠಿಯಲ್ಲಿ ತನ್ನ ತಾತ್ತ್ವಿಕಾಂಶಗಳನ್ನು ರೂಪಿಸಿಕೊಂಡಿತೆಂದು ಭಾವಿಸಲಾಗಿತ್ತು. ಆದರೆ, ಕೊಂಡಗುಳಿ ಕೇಶಿರಾಜನ ಕೃತಿಗಳನ್ನು ಪರಿಶೀಲಿಸಿದಾಗ ವೀರಶೈವ ಧರ್ಮ ತನ್ನ ತಾತ್ತ್ವಿಕ ನಿಲುಮೆಗಳನ್ನು ಹನ್ನೊಂದನೆ ಶತಮಾನದ ಕೊನೆಯಲ್ಲಿ ಹಾಗೂ 12ನೇ ಶತಮಾನದ ಆದಿಭಾಗದಲ್ಲಿ ರೂಪಿಸಿಕೊಂಡಿರಬೇಕೆಂಬ ಸ್ಪಷ್ಟವಾದ ಸೂಚನೆಗಳು ಕಾಣಬರುತ್ತವೆ. ತಾನು ನಂಬಿ ಆಚರಿಸುತ್ತಿರುವ ಧರ್ಮವನ್ನು ಕೇಶಿರಾಜ 'ವೀರಶೈವ' (ಪು. 59. ವ 1), 'ಲಿಂಗಾಯತ' (ಪು. 64. ಪ 33) ಎಂದು ಹೆಸರಿಸಿರುವನು. ಒಂದು ಧರ್ಮದ ತಾತ್ತ್ವಿಕ ನಿಲುಮೆಯನ್ನು ಅದರ ಪಾರಿಭಾಷಿಕ ಪದಗಳಲ್ಲಿ ಗುರುತಿಸುತ್ತೇವೆ. ಕೊಂಡಗುಳಿ ಕೇಶಿರಾಜನ ಕೃತಿಗಳಲ್ಲಿ ತಾತ್ತ್ವಿಕಾಂಶವನ್ನು ಹೇಳುವ ಅಸಂಖ್ಯ ಪಾರಿಭಾಷಿಕ ಪದಗಳನ್ನು ನಾವು ನೋಡಬಹುದು. ಉದಾಹರಣೆಗೆ ಕ್ರೀಲಿಂಗ (ಪು. 40 ಪ. 8), ಇಷ್ಟಲಿಂಗ (ಪು. 40 ಪ. 8), ಲಿಂಗಾನುಭವದ ಸುಖ(ಪು. 44 ಪ. 36), ಮೃಡನನುಭವದ ಸುಖ (ಪು. 46 ಪ. 47), ಸಜ್ಜೆ (ಪು. 31 ಪ. 70 ; ಪು. 46 ಪ. 49), ಉರಸಜ್ಜೆಯ ಲಿಂಗ (ಪು. 46 ಪ. 50), ತುರಿಯ (ಪು. 51 ಪ. 77), ಆರೋಗಣೆ (ಪು. 55 ಪ. 103), ತ್ರಿಲಿಂಗ (ಪು. 59. ಪ. 2), ತ್ರಿವಿಧ ಮಲ (ಪು. 59 ಪ. 2), ಮಹೇಶ (ಪು. 59 ಪ. 3), ತ್ರಿವಿಧ–ಆಯತ, ಸ್ವಾಯತ, ಸನ್ನಿಹಿತ (ಪು. 59 ಪ, 4), ಸಮಯಾಚಾರ– ವೀರಶೈವ ಧರ್ಮದ ಪಂಚಾಚಾರಗಳು : ಸದಾಚಾರ, ಗಣಾಚಾರ, ಶಿವಾಚಾರ, ಭೃತ್ಯಾಚಾರ, ಲಿಂಗಾಚಾರ (ಪು. 60 ಪ. 7), ಆಱುತೆಱ ಭಕ್ತಿ (ಪು. 60 ಪ. 7), ಜಂಗಮ (ಪು. 60 ಪ. 10), ಲಿಂಗಧಾರಣೆ (ಪು. 63 ಪ. 27), ಪಾದತೀರ್ಥ (ಪು. 63 ಪ. 28), ಭವಿ (ಪು. 61 ಪ. 14) ತ್ರಿವಿಧ ಮಲ (ಪು. 59 ಪ. 2), ಏಕಾದಶ ವಿಧದ ಪ್ರಸಾದ (ಪು. 70 ಪ. 78), ಆಱು ಮೂಲ ಮಂತ್ರ (ಪು. 71 ಪ. 82), ಆಱುವ್ರತ (ಪು. 71 ಪ. 82), ಆಱು ಶೀಲ (ಪು. 71 ಪ. 82), ಕಾಯ ಭೋಗ (ಪು. 71 ಪ. 82), ಲಿಂಗ ಭೋಗ (ಪು. 71 ಪ. 82), ಐದು ಜ್ಞಾನ (ಪು. 71 ಪ. 83), ಕಾಯಕ (ಪು. 73 ಪ. 98) ಇತ್ಯಾದಿ.

ಯಾವುದೇ ಧರ್ಮ ತನ್ನ ಹುಟ್ಟಿನೊಂದಿಗೇ ತನ್ನ ತಾತ್ತ್ವಿಕ ನಿಲುಮೆಗಳನ್ನು ಸ್ಥಿರೀಕರಿಸಿಕೊಂಡು ಬರುವುದು ಅಸಂಭವ. ಅನ್ಯಧರ್ಮಗಳಿಂದ ಭಿನ್ನವಾಗಿ ತಾನು

ನಿಲ್ಲಲು, ಅದು ತನ್ನದೇ ಆದ ವಿಶಿಷ್ಟ ಧ್ಯೇಯಗಳನ್ನು ಹೊಂದಿರುವುದು ಸಹಜ. ಆದರೆ, ಅದು ಮತೀಯ ಆಚರಣೆಗೆ ಸಂಬಂಧಿಸಿದ ತಾತ್ತ್ವಿಕಾಂಶಗಳಾಗಿರುವುದಿಲ್ಲ. 12ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ವೀರಶೈವ ಧರ್ಮ ಜಾತ್ಯತೀತವಾದ, ವರ್ಗರಹಿತವಾದ, ಶೋಷಣೆಯಿಂದ ಮುಕ್ತವಾದ ಸುಖೀಸಮಾಜದ ನಿರ್ಮಾಣದತ್ತ ಆಲೋಚಿಸಿ ಅದನ್ನು ಕಾರ್ಯಾಚರಣೆಗೆ ತರಲು ಬಸವನೇ ಮೊದಲಾದ ವಿಚಾರಶೀಲ ವ್ಯಕ್ತಿಗಳು ವಿಶಾಲವಾದ ತಳಹದಿಯಮೇಲೆ ಧರ್ಮದ ರೂಪ ರೇಷೆಯನ್ನು ಬಿಡಿಸಿದರು. ಕೆಲಕಾಲಾನಂತರ ವೀರಶೈವ ಧರ್ಮವು 'ಮತ'ವಾಗ ಹೊರಟಾಗ ಎಲ್ಲ ಮತಗಳಲ್ಲಿ ಕಾಣಬರುವ ಕಟ್ಟು ಪಾಡುಗಳು, ವಿಧಿ ನಿಷೇಧಗಳು, ಆಚರಣೆಗಳು, ತಾತ್ತ್ವಿಕ ವಿಚಾರಗಳು ಇದರಲ್ಲೂ ತಲೆದೋರಿತು. ಚನ್ನಬಸವಣ್ಣ ಷಟ್‌ಸ್ಥಲ ಚಕ್ರವರ್ತಿ ಎಂದು ಖ್ಯಾತನಾಗಿದ್ದು ಅವನ ವಚನಗಳಲ್ಲಿ ತಾತ್ತ್ವಿಕಾಂಶಗಳು, ಆಚರಣಾವಿಧಿಗಳು ಹೆಚ್ಚಾಗಿ ಚರ್ಚಿತವಾಗಿವೆ. ಸಿದ್ಧರಾಮನಲ್ಲಿ ಯೌಗಿಕ ವಿಷಯಗಳು ಪ್ರತಿಪಾದಿತವಾಗಿವೆ. ತೋಂಟದ ಸಿದ್ಧಲಿಂಗೇಶ್ವರರ 'ಷಟ್ಸ್ಥಲ ಜ್ಞಾನಸಾರಾಮೃತ' ದಂತಹ ಕೃತಿಗಳಲ್ಲಿ ತಾತ್ತ್ವಿಕಾಂಶಗಳು ಹಾಗೂ ಆಚರಣಾ ವಿಧಿಗಳು ಕಟ್ಟುನಿಟ್ಟಾಗಿ ಹೇಗೆ ಆಚರಣೆಗೆ ಬಂದಿದ್ದುವೆಂಬುದನ್ನೂ, ವೀರಶೈವ ಸಮಾಜದಲ್ಲಿ ಮತೀಯವಾದ ವಿಷಯಗಳು ಹೇಗೆ ಬಲವಾದ ಸಂಪ್ರದಾಯಕ್ಕೆ ಒಳಗಾಗಿದ್ದುವೆಂಬುದನ್ನೂ ತಿಳಿಯಬಹುದಾಗಿದೆ. ಬಸವಾದಿ ಶರಣರ ಕಾಲಕ್ಕೆ ಹಿಂದೆ ಇದ್ದ ವೀರಶೈವ ಸಮಾಜದಲ್ಲಿ ಆಗತಾನೇ ರೂಪಗೊಳ್ಳುತ್ತಿದ್ದ ವೀರಶೈವ ಧರ್ಮದ ಪ್ರಾರಂಭಿಕ ಚಿಹ್ನೆಗಳನ್ನು ಕಾಣುತ್ತೇವೆ. ಪ್ರಾರಂಭಾವಸ್ಥೆಯಲ್ಲಿ ಅದರ ತತ್ತ್ವಗಳು ಜಟಿಲವಾಗಿರದೆ ಸರಳವಾಗಿವೆ. ಆಚರಣಾ ವಿಧಿಗಳಲ್ಲೂ ತೀರಾ ಬಿಗಿಯನ್ನು (Regidity) ನಾವು ಕಾಣುವುದಿಲ್ಲ. ವೈದಿಕ ಧರ್ಮದ ಕರ್ಮಕಾಂಡವನ್ನೂ, ಅರ್ಥವಿಹೀನವಾದ ಆಚರಣೆಗಳನ್ನೂ ವಿರೋಧಿಸಿ ಸಿಡಿದು ನಿಂತ ಬಸವಪೂರ್ವದ ವೀರಶೈವ ಧರ್ಮದ ಪ್ರಾರಂಭಿಕ ಸೂತ್ರಗಳಲ್ಲಿ ಜೀವಕಾರುಣ್ಯ, ಮಾನವೀಯತೆ, ಕೌಟುಂಬಿಕ ಜೀವನದಲ್ಲಿ ನೆಮ್ಮದಿ, ಸತ್ಯ ಶುದ್ಧ ಕಾರ್ಯಾಚರಣೆ, ಸರಳವೂ ಶಾಂತಿಯುತವೂ ಆದ ಜೀವನಾದರ್ಶ, ಸ್ವಧರ್ಮನಿಷ್ಠೆ, ಲಿಂಗಪೂಜೆ, ಜಂಗಮದಾಸೋಹ, ಕಾಯಕನಿಷ್ಠೆ – ಇವೇ ಮೊದಲಾದ ಸಾಮಾನ್ಯ ವಿಷಯಗಳು ಪ್ರತಿಪಾದಿತವಾಗಿರುವುದನ್ನು ಕಾಣುತ್ತೇವೆ. ಕೊಂಡಗುಳಿ ಕೇಶಿರಾಜನ 'ಶೀಲ ಮಹತ್ವದ ಕಂದ'ವು ಈ ಹಿನ್ನಲೆಯಲ್ಲಿ ಮುಖ್ಯ ಕೃತಿಯಾಗುತ್ತದೆ. ಒಂದು ನೂರ ಒಂದು ಪದ್ಯಗಳಲ್ಲಿ ವೀರಶೈವದ 64 ಶೀಲಗಳನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. ಇದು ವೀರಶೈವ ಆಚಾರಕ್ಕೆ ಸಂಬಂಧಿಸಿರುವುದರಿಂದ, ಇದು ಒಂದು ವಿಧದಲ್ಲಿ ಬಸವಪೂರ್ವದ ವೀರಶೈವವನ್ನು ಪ್ರತಿನಿಧಿಸಿರುವುದರಿಂದ, ಆ ಕಾಲದ ವೀರಶೈವ ಧರ್ಮದ ಗೊತ್ತು ಗುರಿಗಳನ್ನು ನಿರ್ಣಯಿಸಲು ಗಡಿಕಲ್ಲಿನಂತಿದೆ. ಬಸವಯುಗದಲ್ಲಿ ನಾವು ಕಾಣುವ ವರ್ಣ, ವರ್ಗರಹಿತ ಸಾಮಾಜಿಕ ಕಲ್ಪನೆ ; ಹೆಣ್ಣು–ಗಂಡು

ಗಳ ನಡುವಿನ ಕೀಳು ಮೇಲೆನ್ನದ ಸಮಾನ ಭಾವ ; ಸಮರಸ ದಾಂಪತ್ಯ ; ವಾರ-ತಿಥಿ–ಲಗ್ನ–ಶುಭದಿನ–ತಾರಾಬಲ–ಚಂದ್ರಬಲ–ನವಗ್ರಹಬಲ–ಶುಭ ಅಶುಭ–ಶಕುನ ಇತ್ಯಾದಿ ಮೂಢ ನಂಬಿಕೆಗಳ ಖಂಡನೆ; ಕ್ಷೇತ್ರಯಾತ್ರೆ, ಪಾಪ–ಪುಣ್ಯ ಇವೇ ಮೊದಲಾದುವುಗಳ ಬಗೆಗಿರುವ ಪೂಜ್ಯ ಭಾವನೆಗಳ ಬಗೆಗೆ ತಿರಸ್ಕಾರ; ಕಾಯಕ ತತ್ತ್ವ ಇವೇ ಮೊದಲಾದ ಪ್ರಮುಖ ವಿಷಯಗಳನ್ನೂ ಬಸವಪೂರ್ವ ಯುಗ ದಲ್ಲಿಯೇ ನಾವು ಕಾಣುತ್ತೇವೆ.

ಬಸವಪೂರ್ವಯುಗದ ವೀರಶೈವದ 'ಆಚಾರ ಸಂಹಿತೆ'ಯನ್ನು ಕೊಂಡಗುಳಿ ಕೇಶಿರಾಜನು ತನ್ನ 'ಶೀಲಮಹತ್ವದ ಕಂದ'ದಲ್ಲಿ ಸಂಕ್ಷಿಪ್ತವಾಗಿ, ಅಷ್ಟೇ ಖಚಿತ ರೂಪದಲ್ಲಿ ನಿರೂಪಿಸಿರುವನು. ಮೊದಲ ಪದ್ಯದ ಮೊದಲ ಸಾಲಿನಲ್ಲೇ ತನ್ನ ಧರ್ಮವನ್ನು 'ವರ ವೀರಶೈವ' ಎಂದು ಕರೆದು, ಅನಂತರ 'ಭಕ್ತ'ನ ಲಕ್ಷಣವನ್ನು ಹೇಳತೊಡಗುವನು : ಅನುಕ್ರಮವಾಗಿ ಗುರುವಿನ ಮಹಿಮೆಗಳನ್ನು ಸಮರ್ಥವಾದ ವೀರಶೈವಧರ್ಮ ಸಿದ್ಧಾಂತದಿಂದ ತಿಳಿದು, ಅವನ ಕರುಣೆಯನ್ನು ಪಡೆದು, ಯಾವಾತ ಸನ್ಮಾರ್ಗದಲ್ಲಿ ನಡೆಯುವನೋ ಅವನೇ ಗುರುಭಕ್ತನು, ಗುರುವಿನಲ್ಲಿ ಬೆರೆಸಿಹ ಮುಕ್ತನು. ಸದಾ ಪ್ರಸನ್ನನಾಗಿ, ಶಿವಾಧಿಕ್ಯವನ್ನು ಪ್ರತಿಪಾದಿಸಿ, ಆಣವ, ಮಾಯಾ ಹಾಗೂ ಕಾರ್ಮಿಕಗಳೆಂಬ ತ್ರಿವಿಧ ಮಲವನ್ನು ನಿವಾರಿಸಿ, ಇಷ್ಟ, ಪ್ರಾಣ, ಭಾವ ಗಳೆಂಬ ತ್ರಿಲಿಂಗಗಳನ್ನು ಧಾರಣಮಾಡಿ ಕಾಪಾಡುವ ಗುರುವನ್ನು 'ಮಹಾಗುರು' ಎಂದು ಯಾವಾತ ಕರೆಯುವನೋ ಅವನೇ ಗುರುಭಕ್ತನು. ಇನ್ನು 'ಮಹೇಶ'ನ ಲಕ್ಷಣ: ಪರಧನ, ಪರವಸ್ತು, ಪರದೈವಗಳನ್ನು ತೊರೆದು, ಲಿಂಗದಲ್ಲಿ ಮನವನ್ನು ಏಕವಾಗಿಸಿ ಅನ್ಯವನರಿಯದೆ ಇರಬಲ್ಲವನೇ ಮಹಾತ್ಮನು, ಆತನೇ ಮಹೇಶನು. ಆಯತ, ಸ್ವಾಯತ ಸನ್ನಿಹಿತಗಳಿಗೆ ವ್ಯತ್ಯಯವಾಗದಂತೆ, ಕೊನೆಯಿಲ್ಲದಂತೆ ಮೋಹಿ ಯಾಗಿ ನಡೆಯುವಾತನೆ ಕಡುನಿಷ್ಠೆ ಗಟ್ಟಿಗೊಂಡು ವ್ಯವಹರಿಸುವಾತನೆ ಮಹೇಶನು. (ಆಯತ, ಸ್ವಾಯತ, ಸನ್ನಿಹಿತಗಳೆಂಬ ತ್ರಿವಿಧಗಳು ಶರಣಸ್ಥಾನದಲ್ಲಿರುವವನ ಲಿಂಗ ಸಾನ್ನಿಧ್ಯವನ್ನು ಸೂಚಿಸುತ್ತವೆ.. ಲಿಂಗಾಯತ ಎಂದರೆ ಲಿಂಗದ ಮರ್ಮವನ್ನು ಸ್ಥೂಲಕ್ರಿಯೆಗಳಲ್ಲಿ ಅರಿತವನು ಎಂಬರ್ಥವು ಇಲ್ಲಿ ಇರುತ್ತದೆ. ಆದರೆ ಲಿಂಗದ ಮರ್ಮವನ್ನು ಹೆಚ್ಚಿಗೆ ತಿಳಿದು ಆಚರಿಸುವವನು ಲಿಂಗಸಾಯತ, ಇದಕ್ಕೂ ಹೆಚ್ಚಿಗೆ ತಿಳಿದವನು ಲಿಂಗ ಸನ್ನಿಹಿತನು ಎಂದು ಇವರು ಹೇಳಲ್ಪಡುತ್ತಾರೆ–ಫ.ಗು. ಹಳಕಟ್ಟಿ : ಶಿವಾನುಭವ ಶಬ್ದಕೋಶ, ಪು. 72). ವೀರವ್ರತನೂ, ನಿಷ್ಠಾವಂತನೂ, ದೇಹ ಸಂಬಂಧಿಯಾದ ಗುಣಗಳನ್ನೂ ಇಂದ್ರಿಯ ಸಂಬಂಧಿಯಾದ ವಿಕಾರಗಳನ್ನೂ ಕಳೆದು ಕೊಂಡಿರುವವನೂ, ಶೀಲವಂತನೂ, ಧೀರನೂ, ಸಜ್ಜನನೂ, ಸತ್ಯಾಚಾರನೂ, ಸನ್ಮಾರ್ಗಿಯೂ ಆಗಿರುವವನು ಸಹಜವಾಗಿ ಮಹೇಶನು (ಪ. 6). ಪರಸತಿಯನ್ನು ಕಂಡಾಗ ತನ್ನ ತಾಯಿ, ಮಗಳು, ಕೂಡಹುಟ್ಟಿದ ತಂಗಿಯೆಂದು ಯಾವಾತ ಇರು

ತ್ತಾನೊ, ಪರಸ್ತ್ರೀಯನ್ನು ಕಣ್ಣೆತ್ತಿ ಕಾಮಭಾವನೆಯಿಂದ ಯಾವಾತ ನೋಡುವುದಿಲ್ಲವೊ ಅವನೇ ಮಹೇಶನು (ಪ. 18). ಪರಧನವನ್ನು ಯಾವಾತ ಪರೀಕ್ಷಿಸುವುದಿಲ್ಲವೊ, ನೋಡುವುದಿಲ್ಲವೊ, ಅದರ ಸಮೀಪ ಹೋಗುವುದಿಲ್ಲವೊ ಅದಕ್ಕೆ ಸೋಲುವುದಿಲ್ಲವೊ, ಅದಕ್ಕೆ ವಶನಾಗುವುದಿಲ್ಲವೊ, ಪರಧನ ಅಪಹಾರಿಗಳಜೊತೆ ಸೇರುವುದಿಲ್ಲವೊ ಅವನೇ ಮಹೇಶನು (ಪ. 19). ಯಾವಾತ ತನ್ನ ಭಾವದಲ್ಲಿ ಪರಮಾತ್ಮನ ಅಚ್ಚೊತ್ತಿ, ಮನದಲ್ಲಿ ಪರಮಾತ್ಮನನ್ನು ಚೆನ್ನಾಗಿ ನಂಬಿ, ನಿಷ್ಠೆಗಟ್ಟಿಗೊಂಡು ಇರುವನೊ ಅವನೇ ಮಹೇಶ. (ಪ. 20). 'ಜಂಗಮ' ಪದಕ್ಕೆ ಸಂವಾದಿಯಾದ 'ಚರ' ಶಬ್ದವನ್ನು ಕೇಶಿರಾಜ ಬಳಸಿ, ಅವನ ಲಕ್ಷಣವನ್ನೂ ಹೇಳಿರುವನು: ಜಂಗಮನು ಸಾಕ್ಷಾತ್ ಪರಶಿವನು, ಪಂಚವದನನು. ನೊಸಲು ಹಾಗೂ ಮೈಗೆಲ್ಲಾ ಭಸ್ಮಧಾರಣ ಮಾಡಿಕೊಂಡಿರುವವನು. ಮುಖದಲ್ಲಿ ಶಿವನ ನೆನಹು (=ಬಾಯಲ್ಲಿ ಸದಾಶಿವನ ನಾಮಸ್ಮರಣೆ ಮಾಡುತ್ತಿರುವವನು) ಕಂಠದಲ್ಲಿ ಲಿಂಗಧರಿಸಿರುವವನು, ರುದ್ರಾಕ್ಷಿಮಾಲೆ ಹಾಕಿಕೊಂಡಿರುವವನು. ಅವನೇ ಬೇರಾರೂ ಅಲ್ಲ ಮುಕ್ಕಣ್ಣನು (ಪ. 8). ಕೈಲಾಸದಿಂದ ನಮ್ಮ ಭಾಗ್ಯ ರೂಪದಲ್ಲಿ ಆ ಶಿವನೇ ಜಂಗಮರೂಪ ಧರಿಸಿ ಬಂದು ನಮ್ಮ ಕಣ್ಣಿಗೆ ಕಾಣುತ್ತಿರುವನು. ಶಿವನೇ ಆದ ಜಂಗಮವು ನಮಗೆ ಗುರುವು (ಪ. 9). ಚರಮೂರ್ತಿಗೆ ನಾವು ದಾಸರು. ತನಗೆಂದು ಮನೆಯವರಿಗೆಂದು ಅಡಿಗೆ ಮಾಡದೆ ಘನ ಲಿಂಗ ಜಂಗಮಕ್ಕೆಂದು ಕ್ರಮವಾಗಿ ಮಾಡಿಸುವುದು ಹಾಗೂ ಇದಿರಿಗೆ ಕಂಡ ಜಂಗಮಮೂರ್ತಿಯನ್ನು ಬಳಲಿರುವಿರಿ ಮಹಾಸ್ವಾಮಿ, ನನ್ನ ಭಾಗ್ಯವೋ ಎನ್ನುವಂತೆ ನನ್ನ ಕರ್ಮನಿವಾರಣೆಗಾಗಿ ನನ್ನಲ್ಲಿಗೆ ಬಂದಿರಿ ಎಂದು ಸೇವಕಾಭಾವದಲ್ಲಿರುವುದು ಜಂಗಮಭಕ್ತಿ. ಜಂಗಮದಲ್ಲಿ ದಾಸರ ದಾಸ ಭೃತ್ಯರ ಭೃತ್ಯ ತಾನು ಎಂಬ ಪ್ರತಿಜ್ಞೆಯನ್ನೂ, ಸಜ್ಜನನು ತನ್ನ ಸಮಯ (=ಧರ್ಮ)ದ ಆಚಾರವಾದ ಶ್ರದ್ಧಾ, ನೈಷ್ಠಿಕ, ಸಾವಧಾನ, ಅನುಭಾವ, ಆನಂದ ಹಾಗೂ ಸಮರಸವೆಂಬ ಷಡ್ವಿಧ ಭಕ್ತಿಯನ್ನೂ ಆಚರಿಸಬೇಕು. ಚರಮೂರ್ತಿಯನ್ನು ಶಿವನೆಂದೇ ಭಾವಿಸಿದ ಬಳಿಕ ಅವನಲ್ಲಿ ಅವಗುಣವನ್ನು ಕಾಣಬಾರದು, ಅವನನ್ನು ಧಿಕ್ಕರಿಸಬಾರದು. ಶಿವನಿಗೆ ಹೇಗೆ ಅವಗುಣಗಳಿಲ್ಲವೋ ಹಾಗೆ ಜಂಗಮಗೆ ಅವಗುಣಗಳಿಲ್ಲ (ಪ. 10–12).

ಲಿಂಗಪ್ರಸಾದವಲ್ಲದೆ ಬೇರಾವುದನ್ನೂ ಶಿವಭಕ್ತನಾದವನು ಸೇವಿಸಕೂಡದು. ಲಿಂಗಪ್ರಸಾದವಲ್ಲದದು ಕಿಲ್ಬಿಷ. ಆದಕಾರಣ, ಏನನ್ನೇ ಆಗಲಿ ಭಕ್ತನಾದವನು ಲಿಂಗಕ್ಕೆ ಅರ್ಪಿಸಿ ಬಳಿಕ ಅದನ್ನು ಸ್ವೀಕರಿಸುವುದು. (ಗುರುವಿನಿಂದ ದೀಕ್ಷೆಯಾಗುವಾಗ ಮಾಂಸಪಿಂಡವು ಮಂತ್ರಪಿಂಡವಾಗಿ ಪರಿವರ್ತನೆಗೊಳ್ಳುವುದು. ಮಲತ್ರಯಗಳನ್ನು ನೀಗಿದ ಶರೀರವು ಲಿಂಗತನುವಾಗುವುದು. ಲಿಂಗಶರೀರಿಯಾದ ಮಂತ್ರಶುದ್ಧನಾದ ಜೀವನು ಅಂಗನೆನಿಸಿಕೊಳ್ಳುವನು.) ಆದ್ದರಿಂದಲೇ, ಕೇಶಿರಾಜನು 'ಲಿಂಗಶರೀರಿಯಾದ

ಮಂತ್ರಶುದ್ಧನಾದ ಜೀವನು ಅಂಗನೆನಿಸಿಕೊಳ್ಳುವುದರಿಂದ ಲಿಂಗದ ಶೇಷವನ್ನು ಮಾತ್ರ ಸ್ವೀಕರಿಸುವುದು' (ಪ. 13) ಎಂದು ತನ್ನ ಕಾಲದ ಆಚಾರವನ್ನು ಹೇಳುವನು. ಗುರುವಿನಿಂದ ದೀಕ್ಷೆ ಪಡೆದು ಶುದ್ಧಾಂಗದವರನ್ನು ಲಿಂಗದೇಹಿಗಳಲ್ಲದವರನ್ನು 'ಭವಿ' ಎಂದು ಕೇಶಿರಾಜ ಗುರುತಿಸಿರುವನು (ಮುಂದೆ ಇದು ವಚನಕಾರರಿಗೆ, ವೀರಶೈವರಲ್ಲದವರನ್ನು ಕುರಿತು ಹೇಳುವಾಗ ನಿಶ್ಚಿತ ಅರ್ಥವುಳ್ಳ 'ಪಾರಿಭಾಷಿಕ ಪದ' ವಾಗಿಬಿಟ್ಟಿತು). ಭವಿಯು ಕೊಟ್ಟುದನ್ನು ಲಿಂಗಕ್ಕೆ ಅರ್ಪಿಸಿದರೆ ರೌರವ ನರಕ. ತಿಳಿದೂ ತಿಳಿದೂ ಭವಿಪಾಕವನ್ನು ಸ್ವೀಕರಿಸಿದ್ದೇ ಆದರೆ ನರಕದಲ್ಲಿ ಭವಿಗಿಂತ ಗಟ್ಟಿಯಾಗಿ ಕಟ್ಟಿಬೀಳುವನು (ಪ.14). ಭವಿಯನ್ನು ಮುಟ್ಟಲಾಗದು. ಅಷ್ಟೇ ಅಲ್ಲ, ಅವನು ನಿರ್ಮಿಸಿದ ಮನೆ, ಒಲೆ, ಕೈಗಾಣ, ಮಡಕೆ, ಮೊರ, ಒರಳು, ಒನಕೆ-ಇವುಗಳು ವೀರಶೈವನಿಗೆ ಸ್ವೀಕಾರಾರ್ಹವಲ್ಲ. (ಭವಿಯ ಬಗ್ಗೆ ತುಂಬ ಮಡಿವಂತಿಕೆಯನ್ನು ಪ್ರಕಟಿಸಿರುವ ಕೇಶಿರಾಜ ಅದಕ್ಕಾಗಿಯೇ ಹತ್ತಾರು ಪದ್ಯಗಳನ್ನೇ ಮೀಸಲಿಟ್ಟಂತಿದೆ). ವೀರಶೈವನು ತನಗೆ ತನ್ನ ಸಂಸಾರಕ್ಕೆ ಬೇಕಾದ ದಿನನಿತ್ಯದ ಬಳಕೆಯ ವಸ್ತುಗಳನ್ನು ತಾನೇ ಮಾಡಿಕೊಳ್ಳಬೇಕು. ಹಾಗೆ ಮಾಡಿಕೊಳ್ಳದಿದ್ದರೆ ಕೇಶಿರಾಜನ ಪ್ರಕಾರ ಅಂತಹವನು 'ದುಃಶೀಲ' ನಾಗುವನು. ವೀರಶೈವನು ಭವಿಯನ್ನು ಹೇಗೆ ಸ್ಪರ್ಶಿಸಲಾಗದೊ ಹಾಗೆಯೇ ಬೇರೆಯವರ ಹೊನ್ನು-ಹೆಣ್ಣು-ಮಣ್ಣುಗಳನ್ನೂ ಮುಟ್ಟಲಾಗದು (ಪ. 15-16). (ಮುಂದೆ ವಚನಕಾರರು ಈ 'ಶೀಲಕ್ಕೆ' ಕೊಟ್ಟ ಮಹತ್ವವನ್ನು ಅವರ ವಚನಗಳಿಂದ ನಾವು ಅರಿಯಬಹುದಾಗಿದೆ.) ಭವಿಯನ್ನು ಮನೆಗೆ ಹೊಗಿಸುವುದನ್ನು ಖಂಡಿಸುವ ಕೇಶಿರಾಜ ಬೇರೆಯವರಿಗೆ ದಾನ ಕೊಡುವುದನ್ನು ಖಂಡಿಸಿಲ್ಲ. ಬೇರೆಯವರಿಗೆ ತನ್ನಲ್ಲಿರುವುದನ್ನು ಅವರು ಬೇಡಿದರೆ ಕೊಡಲಾರೆ ಎನ್ನುವುದು ಶೀಲವಲ್ಲ. ಎಂದಿರುವನು (ಪ. 17). ಅನ್ಯರ ದೈವ ಹಾಗೂ ಪರದ್ರವ್ಯ ಇವುಗಳು ವೀರಶೈವನಿಗೆ ಸ್ವೀಕಾರಾರ್ಹವಲ್ಲ. ಅವನ್ನು ಬಿಡುವುದೇ ಶೀಲ. ಭವಿಪಾಕ, ಭವಿಯ ಭಾಂಡ, ಭವಿಯ ಲಿಂಗ, ಭವಿಯ ಭೂಮಿ, ಭವಿಯ ವಂದನೆ, ಭವಿಯ ನೋಟ–ಮಾಟ, ಭವಿಯ ಸೇವೆ—ಇವುಗಳನ್ನು ಹೊಂದದೆ ಇರುವವನೇ ಶೀಲವಂತನು (ಪ. 21).

ಕೊಂಡಗುಳಿ ಕೇಶಿರಾಜನು ತನ್ನ ಕಾಲದ ತನ್ನ ಧರ್ಮದ ತಾತ್ತ್ವಿಕಾಂಶಗಳನ್ನು ಪ್ರತಿಪಾದಿಸುವ ಪಾರಿಭಾಷಿಕ ಪದಗಳನ್ನು ತನ್ನ ಕೃತಿಗಳಲ್ಲಿ ಹೇರಳವಾಗಿ ಬಳಸಿರುವನೆಂಬುದನ್ನು ಹಿಂದೆಯೇ ಹೇಳಲಾಗಿದೆ. 'ಶೀಲಮಹತ್ವದ ಕಂದ'ವು ಪ್ರಧಾನವಾಗಿ ವೀರಶೈವದ ತತ್ತ್ವ ಹಾಗೂ ಆಚರಣೆಗಳಿಗೆ ಬೆಲೆಕೊಟ್ಟಿದೆ. ಇದರ ಬಂಧ (Structure) ವಿಶಿಷ್ಟವಾದುದು. ಪ್ರಾರಂಭ ಹಾಗೂ ಅಂತ್ಯ ಭಾಗಗಳಲ್ಲಿ ತತ್ತ್ವ ನಿರೂಪಣೆ ಮಾಡಿ ಮಧ್ಯೆ ಅದರ ಪ್ರಾಣರೂಪವಾದ ಆಚರಣೆಗಳನ್ನು ವಿವರಿಸಿರುವನು. ಪ್ರಾರಂಭದಲ್ಲಿ, ಷಟ್ಸ್ಥಲದ ಗುರು-ಲಿಂಗ-ಜಂಗಮ ಲಕ್ಷಣಗಳ ಪ್ರಸ್ತಾಪ

ಬರುತ್ತದೆ. ಅವು ಶಿವನ ತ್ರಿವಿಧ ರೂಪಗಳು ಎಂದು ಒತ್ತಿ ಹೇಳುವನು. ಕೊನೆಯ ಭಾಗದಲ್ಲಿ, ಅಕ್ರೋಧ, ಸತ್ಯವಚನ, ಕ್ಷಮೆ, ಭವಿಭಕ್ತ ಭೇದ, ಅನುಗ್ರಹ, ಸತ್ಪಾತ್ರ ದ್ರವ್ಯಾರ್ಪಣಗಳೆಂಬ ಷಡ್ವಿಧ ಶೀಲಗಳನ್ನೂ (ಪ. 87–89) ; ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ, ಭಕ್ತಿಗಳೆಂಬ ಷಡ್ವಿಧ ವ್ರತಗಳನ್ನೂ (ಪ. 90-93) ವಿವರಿಸುವನು. ಷಡ್ವಿಧ ಶೀಲಗಳಿಗಿಂತ ಷಡ್ವಿಧ ವ್ರತಗಳಿಗೆ ಹೆಚ್ಚಿನ ವಿವರಣೆ ನೀಡಿರುವುದು ಇಲ್ಲಿ ಮುಖ್ಯ. ಗುರು-ಲಿಂಗ-ಜಂಗಮ ವ್ರತಗಳ ಬಗೆಗೆ ಕೊಂಡಗುಳಿ ಕೇಶಿರಾಜ ಪ್ರಾರಂಭವಲ್ಲಿಯೇ ಸಾಕಷ್ಟು ಹೇಳಿರುವುದರಿಂದ, ಷಡ್ವಿಧ ವ್ರತಗಳಲ್ಲಿ ಮೊದಲ ಮೂರರ ಬಗೆಗೆ ಹೆಚ್ಚು ಹೇಳದೆ, ಉಳಿದವಕ್ಕೆ ಹೆಚ್ಚಿನ ವಿವರ ನೀಡುವನು. ಷಡ್ವಿಧ ವ್ರತಗಳಲ್ಲಿ ನಾಲ್ಕನೆಯದು, 'ಪ್ರಸಾದ ವ್ರತ'. ವೀರಶೈವನ ಪ್ರಗತಿಗೆ ಸಂಬಂಧಿಸಿದ ಎಲ್ಲ ಆಚರಣೆಗಳು 'ಏಕಾದಶ ಪ್ರಸಾದ'ಗಳಲ್ಲಿ ಸೇರಿವೆ. ಗುರುಪ್ರಸಾದ, ಲಿಂಗಪ್ರಸಾದ, ಜಂಗಮಪ್ರಸಾದ, ಆಪ್ಯಾಯನ ಪ್ರಸಾದ, ಸಮಯ ಪ್ರಸಾದ, ಪಂಚೇಂದ್ರಿಯ ವಿರಹಿತಪ್ರಸಾದ, ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದ, ಪ್ರಸಾದಿಯ ಪ್ರಸಾದ, ಸಮಯ ಪ್ರಸಾದ, ಸದ್ಭಾವ ಪ್ರಸಾದ, ಸಮತಾ ಪ್ರಸಾದ, ಜ್ಞಾನ ಪ್ರಸಾದ–ಇವು ಏಕಾದಶ ಪ್ರಸಾದಗಳು* ಇವುಗಳನ್ನು ಹೀಗೆ ವಿವರಿಸಬಹುದು :

1. ಮಂತ್ರಧ್ಯಾನದಿಂದ ಪದಾರ್ಥದ ಪೂರ್ವಾಶ್ರಯವಳಿದುದೇ ಶುದ್ಧ (= ಗುರು) ಪ್ರಸಾದ.

2. ಗುರು ಪ್ರಸಾದವನ್ನು ಲಿಂಗಕ್ಕರ್ಪಿಸಲು ಆಗ ಪ್ರಸಾದ ಕಳೆ ಲಿಂಗದಲ್ಲಿ ನೆಲೆಗೊಳ್ಳುವುದು. ಇದು ಲಿಂಗ ಪ್ರಸಾದ.

3. ಲಿಂಗ ಪ್ರಸಾದವನ್ನು ಜಿಹ್ವೆಯ ಮೂಲಕ ಸ್ವೀಕರಿಸುವುದು. ಇದು ಜಂಗಮಮುಖವಾದುದೆಂದು ಭಾವಿಸಿ ಹಾಗೆ ಸ್ವೀಕರಿಸಿದಲ್ಲಿ ಜಂಗಮ ಪ್ರಸಾದ.

4. ಗುರು-ಲಿಂಗ-ಜಂಗಮ ಪ್ರಸಾದಗಳು ಲಿಂಗಮುಖವಾದವುಗಳೆಂಬ ದೃಢ ಭಾವವು ನೆಲೆಗೊಳ್ಳಲು ಅದು ಆಪ್ಯಾಯನ ಪ್ರಸಾದವು.

5. ಪ್ರಸಾದ ಸೇವನಾಕಾಲದಲ್ಲಿ ಇತರ ಪದಾರ್ಥಗಳಿಗೆ ಲಕ್ಷ್ಯವಿಡದೆ ಅವು ಅನರ್ಪಿತವೆಂದು ತಿಳಿಯುವುದು ಸಮಯ ಪ್ರಸಾದವು.

6. ಪ್ರಸಾದ ಸೇವನೆಯಲ್ಲಿ ಪಂಚೇಂದ್ರಿಯಗಳು ಮುಟ್ಟದ ಮುನ್ನವೇ ಅವುಗಳನ್ನು ಸೇವಿಸುವುದು ಪಂಚೇಂದ್ರಿಯ ವಿರಹಿತ ಪ್ರಸಾದವು.

---

* ನೋಡಿ : ಚೆನ್ನಬಸವಣ್ಣನವರ ವಚನಗಳು : ಸಂ. ಡಾ|| ಆರ್. ಸಿ. ಹಿರೇಮಠ, ವ. 819.

7. ಅಂತಃಕರಣ ಚತುಷ್ಟಯಗಳಿಗೆ ದೂರವಾಗಿ ಪ್ರಸಾದ ಸೇವಿಸುವುದು ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದವು.

8. ಪ್ರಸಾದಿಯು ಪ್ರಸಾದವನ್ನು ಜಂಗಮಕ್ಕೆ ಕೊಟ್ಟು ಸಮರಸ ಭೋಗ ಮಾಡುವುದು ಪ್ರಸಾದಿಯ ಪ್ರಸಾದವು.

9. ಪ್ರಸಾದವನ್ನು ಸದ್ಭಾವದಿಂದ ಸೇವಿಸುವುದೇ ಸದ್ಭಾವ ಪ್ರಸಾದವು.

10. ಹಸಿವು ಅಡಗಿ ಶಾಂತಿ ಸೈರಣೆಯಿಂದಾಗುವುದೇ ಸಮತಾ ಪ್ರಸಾದವು.

11. ಸಮತಾ ಪ್ರಸಾದದಲ್ಲಿ ತೃಪ್ತಿಯನ್ನು ಹೊಂದಿ ಕ್ರಿಯಾ ಖಂಡಿತ ಮಾಡುವಲ್ಲಿ ಅಖಂಡ ಪರಿಪೂರ್ಣ ಪ್ರಸಾದಿಯಾಗಿರುವುದು ಜ್ಞಾನ ಪ್ರಸಾದವು[10].

ಷಡ್ವಿಧ ವ್ರತಗಳಲ್ಲಿ ಐದನೆಯದು, ಪಾದೋದಕ ವ್ರತ. ವೀರಶೈವರಲ್ಲಿ ದಶವಿಧ ಪಾದೋದಕಗಳು ಬಳಕೆಯಲ್ಲಿವೆ. ಪಾದೋದಕ, ಲಿಂಗ, ಮಜ್ಜನ, ಸ್ಪರ್ಶನ, ಅವಧಾನ, ಆಪ್ಯಾಯನ, ಹಸ್ತ, ಪರಿಣಾಮ, ನಿರ್ನಾಮ, ಸತ್ಯ – ಇವು ದಶವಿಧ ಪಾದುದಕಗಳು. ಅಷ್ಟಾವರಣಗಳಲ್ಲಿ ಪಾದೋದಕವೂ ಒಂದು. ಇದು ಮನುಷ್ಯನ ಅಂತರಂಗ ಬಹಿರಂಗಗಳನ್ನು ಶುದ್ಧಗೊಳಿಸುತ್ತದೆ. "ಸ್ಪರ್ಶನೋದಕ ಅವಧಾನೋದಕಗಳು ಅನುಕ್ರಮವಾಗಿ ಆಚಾರಲಿಂಗ ಗುರುಲಿಂಗಗಳಿಗೆ ಸಂಬಂಧಿಸಿದವು. ಇವು ಗುರುಪಾದೋದಕವಾಗಿ ಇಷ್ಟಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಗುರು ಸ್ವರೂಪವು. ಆಪ್ಯಾಯನೋದಕ, ಹಸ್ತೋದಕಗಳು ಅನುಕ್ರಮವಾಗಿ ಶಿವಲಿಂಗ ಜಂಗಮಲಿಂಗಗಳಿಗೆ ಸಂಬಂಧಿಸಿದವು. ಇವು ಲಿಂಗಪಾದೋದಕವಾಗಿ ಪ್ರಾಣಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಲಿಂಗ ಸ್ವರೂಪವು. ಪರಿಣಾಮೋದಕ ನಿರ್ನಾಮೋದಕಗಳು ಅನುಕ್ರಮವಾಗಿ ಪ್ರಸಾದಲಿಂಗ ಮಹಾಲಿಂಗಗಳಿಗೆ ಸಂಬಂಧಿಸಿದವು. ಇವು ಜಂಗಮ ಪಾದೋದಕವಾಗಿ ಭಾವಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಜಂಗಮ ಸ್ವರೂಪವು. ಕಡೆಗೆ ಉಳಿಯುವ ಸತ್ಯೋದಕವು ನಿಃಕಲ ಪರತತ್ವಕ್ಕೆ ಸಮರ್ಪಣೆಯಾಗುತ್ತದೆ. ಇದು ಅನಾದಿ ಶರಣ ಪ್ರಸನ್ನಮೂರ್ತಿಯು"[11]

ಷಡ್ವಿಧ ವ್ರತಗಳಲ್ಲಿ ಕೊನೆಯದು, ಭಕ್ತಿ, ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಸುಜ್ಞಾನ, ಸಮರಸಗಳೆಂದು ಆರು ವಿಧವಾದ ಭಕ್ತಿಗಳು ಪ್ರಸಿದ್ಧವಿವೆ. ಚನ್ನಬಸವಣ್ಣ ತನ್ನ ವಚನವೊಂದರಲ್ಲಿ[12] "ನಂಬುಗೆಗೆ ಇಂಬಾಗದೆ ನೈಷ್ಠೆ ನೆಲೆಗೊಳ್ಳದು; ನೈಷ್ಠೆ ನೆಲೆಗೊಳ್ಳದೆ ಎಚ್ಚರವಚ್ಚೊತ್ತದು ; ಎಚ್ಚರವಿಲ್ಲದೆ ಅನುಭವವು ಮನಂಗೊಳ್ಳದು; ಅನುಭವವಿಲ್ಲದೆ ಆನಂದವು ತಲೆದೋರದು ; ಆನಂದವಿಲ್ಲದ ಶಿವಲಿಂಗದಲ್ಲಿ ಸಮರಸವಾಗದು. ಇಂತೀ ಆಱು ತೆಱನಾದ ಭಕ್ತಿಯಂ ಗೊತ್ತನಱಿದಡೆ ಭಕ್ತನೆಂಬೆನು, ಮಹೇಶ್ವರನೆಂಬೆನು ; ಇಲ್ಲದಿರ್ದಡೆ ಶುದ್ಧ ಭವಿಯೆಂಬೆನು..."

ಎಂದಿರುವನು. ಅವನೇ ಮತ್ತೊಂದು ವಚನದಲ್ಲಿ[13] "ಆತ್ಮಾಂಗದಲ್ಲಿ ಸದ್ಭಾವಹಸ್ತದಿಂದ ಎಲ್ಲಾ ಇಂದ್ರಿಯಂಗಳ ಪರಿಣಾಮವನು ಸಮರಸಭಕ್ತಿಯಿಂದ ಮಹಾಲಿಂಗಕ್ಕರ್ಪಿಸುವಾತನೆ ಐಕ್ಯ. ವ್ಯೋಮಾಂಗದಲ್ಲಿ ಸುಜ್ಞಾನ ಹಸ್ತದಿಂದ ಸುಶಬ್ದ ದ್ರವ್ಯವನು ಆನಂದ ಭಕ್ತಿಯಿಂದ ಪ್ರಸಾದಲಿಂಗಕ್ಕರ್ಪಿಸುವಾತನೆ ಶರಣ. ಅನಲಾಂಗದಲ್ಲಿ ಮನೋಹಸ್ತದಿಂದ ಸುಸ್ಪರ್ಶನದ್ರವ್ಯವನು ಅನುಭಾವ ಭಕ್ತಿಯಿಂದ ಜಂಗಮ ಲಿಂಗಕ್ಕರ್ಪಿಸುವಾತನೆ ಪ್ರಾಣಲಿಂಗಿ. ಅನಲಾಂಗದಲ್ಲಿ ನಿರಹಂಕಾರ ಹಸ್ತದಿಂದ ಸುರೂಪು ದ್ರವ್ಯವನು ಅವಧಾನ ಭಕ್ತಿಯಿಂದ ಶಿವಲಿಂಗಕ್ಕರ್ಪಿಸುವಾತನೆ ಪ್ರಸಾದಿ: ಜಲಾಂಗದಲ್ಲಿ ಸುಬುದ್ಧಿ ಹಸ್ತದಿಂದ ಸುರಸದ್ರವ್ಯವನು ನೈಷ್ಠಿಕಾಭಕ್ತಿಯಿಂದ ಗುರು ಲಿಂಗಕ್ಕರ್ಪಿಸುವಾತನೆ ಮಾಹೇಶ್ವರ. ಭೂಮ್ಯಂಗದಲ್ಲಿ ಸುಚಿತ್ತಹಸ್ತದಿಂದ ಸುಗಂಧ ದ್ರವ್ಯವನು ಸದ್ಭಕ್ತಿಯಿಂದಾಚಾರಲಿಂಗಕ್ಕರ್ಪಿಸುವಾತನೆ ಭಕ್ತ" ಎಂದಿರುವನು.

ಷಟ್ಸ್ಥಲದ ಪ್ರಾಣಲಿಂಗಿ ಅವಸ್ಥೆಯಲ್ಲಿನ ಶಿವಯೋಗಕ್ಕೆ ಸಂಬಂಧಿಸಿದ ವಿವರಗಳನ್ನು ಸೂಕ್ಷ್ಮವಾಗಿ ಕೊಂಡಗುಳಿ ಕೇಶಿರಾಜನು 'ಶೀಲಮಹತ್ವದ ಕಂದ'ದಲ್ಲಿ ಹೇಳಿರುವನು (ಪ. 94–97). ವ್ಯೋಮಚಕ್ರದಲ್ಲಿನ ವಸ್ತು ಪರಬ್ರಹ್ಮನಾದ ಸುಧಾಮಯ ಲಿಂಗವನ್ನು ಸ್ವಸ್ಥಾನದಿಂದ ಭಾವಿಸಿ, ಸ್ವಸ್ಥಿರದ ವಿವೇಕಬುದ್ಧಿಯಿಂದ ತಿಳಿಯುವುದು (ಪ. 94). ಮೂಲಚಿತ್ತು ಅಥವಾ ಜ್ಞಾನಚಿತ್ತು ಓಂಕಾರದ ಮೂಲಕ ಇಡೀ ಬ್ರಹ್ಮಾಂಡವನ್ನು ವ್ಯಾಪಿಸಿರುತ್ತದೆ. ಈ ಮೂಲಚಿತ್ತು ಅತ್ಯಂತ ಪ್ರಕಾಶಮಾನವಾದದ್ದು, ಆನಂದಮಯವಾದದ್ದು, ಜ್ಞಾನಮಯವಾದದ್ದು. ಇದನ್ನೇ ಪ. 95ರಲ್ಲೂ ಹೇಳಿದಂತಿದೆ. ಹದಿನಾರು ದಳಗಳುಳ್ಳ ವಿಶುದ್ಧಿ ಚಕ್ರದಲ್ಲಿಯ ಲಿಂಗಕ್ಕೆ ಷೋಡಶಕಳಾಲಿಂಗವೆಂದು ಕರೆಯುವರು. ಇದನ್ನೇ ಪ. 96ರಲ್ಲಿ ಹೇಳಲಾಗಿದೆ. ಚಿದ್ಘನ ಲಿಂಗಕ್ಕೆ ಚಿದ್ಘನವು ಆಕಾಶ ; ಚಿಚ್ಚುಖ, ಚಿತ್ಪ್ರಾಣ, ಚಿದ್ಘನವು ಅಂಗವಾಗಿ ರುವುದು. ಚಿದ್ಘನ ಲೋಲನು ಚಿದ್ಘನ ಶೀಲದಲ್ಲಿ ಇರುವನು (ಪ. 97) – ಹೀಗೆ ಇಲ್ಲಿ ಯೌಗಿಕಾನುಭವಗಳು ಸೂಕ್ಷ್ಮ ವಿವರಣೆ ಪಡೆದುಕೊಂಡಿವೆ.

'ಕಾಯಕ' ವೀರಶೈವಧರ್ಮದ ವಿಶಿಷ್ಟ ಪಾರಿಭಾಷಿಕ ಪದ. ಇದನ್ನು ಮೊದಲಿಗೆ ಬಳಸಿ, ಅದರ ಅಂತಸ್ಥವನ್ನು ಮೊದಲಿಗೆ ತಿಳಿಸಿ, ಮುಂದಣವರಿಗೆ ಸ್ಫೂರ್ತಿ ನೀಡಿದವನು ಕೊಂಡಗುಳಿ ಕೇಶಿರಾಜ. ಅವನ ಪ್ರಕಾರ ಯಾವುದೇ ಕೆಲಸ (= ವೃತ್ತಿ) ಶಿವಾನುಗ್ರಹವೆಂದು ಭಾವಿಸಿ, ಶಿವನ ಸೇವೆಯೆಂದೇ ನಂಬಿ ಮಾಡುವುದು 'ಕಾಯಕ' (ಪ. 98). ಕೊನೆಯದಾಗಿ, ಕೊಂಡಗುಳಿ ಕೇಶಿರಾಜ ನಿಡುಬಾಳಿನಲ್ಲಿ ಕಂಡುಕೊಂಡ ಪರಮ ಸತ್ಯಗಳಿವು : ಶಿವಭಕ್ತಿಯೇ ಭಕ್ತರಿಗೆ ಮೂಲಧನ ; ಶಿವಭಕ್ತಿಯೇ ಭಕ್ತನಿಗೆ ಕುಲವು ; ಶಿವಭಕ್ತಿಯೇ ಭಕ್ತನಿಗೆ ಬಲವು ; ಶಿವಭಕ್ತಿಯೇ ಭಕ್ತನಿಗೆ ನೆಲವು–ಛಲವು; ಶಿವನೇ ಶಿವಭಕ್ತನಿಗೆ ಸಿರಿಯೂ, ಭಂಡಾರವು (ಪ. 100).

ಕೊಂಡಗುಳಿ ಕೇಶಿರಾಜನ 'ಶೀಲಮಹತ್ವದ ಕಂದ'ದಲ್ಲಿ ಬರುವ 64 ಶೀಲಗಳನ್ನು ಆಧರಿಸಿ ನಾವು ಬಸವಪೂರ್ವದ ವೀರಶೈವ ಸಮಾಜದ ಆಚಾರ ಸಂಹಿತೆಯನ್ನು ಹೀಗೆ ರೂಪಿಸಬಹುದು :

ವೀರಶೈವನು ತಾನು ವಾಸಿಸುವ ಮನೆ, ಸಾಕುವ ಪಶು, ಉಪಯೋಗಿಸುವ ವಸ್ತುಗಳು–ಹೀಗೆ ಎಲ್ಲದಕ್ಕೂ ಶಿವಮುದ್ರೆ ಹಾಕುತ್ತಿದ್ದನು. ತನಗೊಂದು ಶೀಲ ತನ್ನ ಮಡದಿಗೊಂದು ಶೀಲವೆನ್ನದೆ ಸಮಶೀಲವುಳ್ಳವರಾಗಿ ಏಕಮನಸ್ಕರಾಗಿ ನೆಳಲಿನಂತೆ ದಂಪತಿಗಳು ಪರಸ್ಪರ ಅರಿತು ನಡೆಯುವವರಾಗಿದ್ದರು. ತನ್ನ ಪತ್ನಿ ತನ್ನ ಅರ್ಧಾಂಗಿಯಾಗಿರುವುದರಿಂದ ತನಗೊಂದು ನೀತಿ ತನ್ನ ಪತ್ನಿಗೊಂದು ನೀತಿ ಎನ್ನದೆ, ಆಕೆ ರಜಸ್ವಲೆಯಾಗಿದ್ದರೂ ಮೈಲಿಗೆ ಎಂದು ಅವಳನ್ನು ದೂರವಿರಿಸದೆ ನಿತ್ಯದಂತೆ ಪತಿಯು ಅವಳನ್ನು ನಡೆಸಿಕೊಳ್ಳುತ್ತಿದ್ದನು. ಪತಿಯು ಏನೇ ವಿಚಾರಮಾಡಿದರೂ, ಏನೇ ಮಾಡಿದರೂ ತಾನೇನೂ ಅನ್ನದೆ ಸುಖದುಃಖಗಳನ್ನು ಸಮಾನವಾಗಿ ಸ್ವೀಕರಿಸಿ, ಗಂಡನಿಗೆ ಅನುಕೂಲೆಯಾಗಿ ಪತ್ನಿ ವರ್ತಿಸುತ್ತಿದ್ದಳು. ಭಕ್ತಿಯ ಮರ್ಮವನ್ನರಿತು ನಿರ್ಮಲನೂ ನಿಶ್ಚಿಂತನೂ ಆಗಿ ಕರ್ಮಪ್ರಧಾನವಾದ ಪೂಜೆಗಳನ್ನು ವರ್ಜಿಸಿ ಧರ್ಮಾಚಾರದಲ್ಲಿ ನಡೆಯುತ್ತಿದ್ದರು. ತನ್ನ ಪತ್ನಿ ಗರ್ಭವತಿಯಾಗಿರಲು ತನಗಿಂತ ಉತ್ತಮರೂ ಶೀಲಸಂಪನ್ನರೂ ವೇದಾಧ್ಯಯನ ಮಾಡಿರುವವರೂ ಆದವರಿಂದ ಭಸಿತವಿಡಿಸಿ ಲಿಂಗಧಾರಣೆ ಮಾಡಿಸುವನು. ಜಂಗಮವು ಶಿವನಿಗಿಂತ ಅಧಿಕವಾದ್ದರಿಂದ ಜಂಗಮದ ಪಾದತೀರ್ಥವನ್ನು ಲಿಂಗಮಜ್ಜನಕ್ಕೆ ಬಳಸಿ, ಜಂಗಮದ ಪ್ರಸಾದವನ್ನು ಲಿಂಗಕ್ಕೆ ಅರ್ಪಿಸಿ ಸ್ವೀಕರಿಸುವನು. ಗುರು ಲಿಂಗ ಜಂಗಮರು ಒಬ್ಬನೇ ಆದ ಪರಮಾತ್ಮನ ತ್ರಿವಿಧ ಮೂರ್ತಿಗಳು. ಲಿಂಗವೇ ಜಂಗಮವೆಂದು ಬಲವಾಗಿ ನಂಬುವನು. ಬಾವಿಯ ನೀರನ್ನು ತುಂಬಿಡಲಾಗಿರುವ ಹೊಸ ಪಾತ್ರೆಗೆ ವಸ್ತ್ರವನ್ನು ಕವಿಸಿ, ಮಂತ್ರದಿಂದ ಅದನ್ನು ಶುದ್ಧೀಕರಿಸಿ, ಅನಂತರ ಶಿವನಿಗೆ ಎಡೆಮಾಡಲು ಅಡಿಗೆಗೆ ಆ ನೀರನ್ನು ಬಳಸುವನು. ಶಿವನಿಗೆ ಹಸುವಿನ ಹಾಲಲ್ಲದೆ ಅನ್ಯಪ್ರಾಣಿಗಳ ಹಾಲನ್ನು ಅರ್ಪಿಸಬಾರದು. ಎಮ್ಮೆಯ ಹಾಲನ್ನು ಶಿವನಿಗೆ ಅರ್ಪಿಸಿದರೆ ಕೇಡೆಂದು ಬಗೆದು ಅದನ್ನು ಅರ್ಪಿಸದಿರುವನು. ಶಿವಭಕ್ತನ ಕೈಯಲ್ಲಿ ಬಟ್ಟೆ, ಪಾತ್ರೆ ಹಾಗೂ ಮನೆಯನ್ನು ಶುಚಿಮಾಡಿಸುವ, ಶಿವಭಕ್ತನಿಂದಲೇ ಕೇಶಚ್ಛೇದನ ಮಾಡಿಸುವ ನಿಯಮವುಳ್ಳವನು.

ಲಿಂಗಾಯುತ ಧರ್ಮಿಯು ತನ್ನ ಹಸು ಮತ್ತು ಕರುವಿನ ಮೇಲೆ ಲಕ್ಷಣವಾಗಿ ಲಿಂಗಮುಂದ್ರೆಯನ್ನು ಒತ್ತುವನು. ಅವುಗಳಿಗೆ ಭಕ್ತನ ಕೈಯಿಂದಲೇ ಹುಲ್ಲನ್ನೂ, ನೀರನ್ನೂ, ಉಣಿಸನ್ನೂ ಹಾಕಿಸಿ ಭಕ್ತನಿಂದಲೇ ಅವುಗಳ ಆರೈಕೆ ಮಾಡಿಸುವನು. ಬಗೆ ಬಗೆಯ ಪ್ರಾಣಿಗಳು ಹರಿವ ನೀರಿನಲ್ಲಿ ವಾಸಿಸುವುದರಿಂದ, ನಾನಾ ಬಗೆಯ ಜನರು ಸಮುದ್ರದ ನೀರನ್ನು ಕಟ್ಟೆ ಕಟ್ಟಿ ಉಪ್ಪನ್ನು ತಯಾರಿಸುವುದರಿಂದ ಆದನ್ನು

ಸ್ವೀಕರಿಸುವುದು ದೋಷವೆಂದು ಹೇಳುವರಾದ್ದರಿಂದ ಉಪ್ಪನ್ನು ವರ್ಜಿಸುವನು. ತನ್ನ ಮನೆಯ ಹಸುವಿನ ಸೆಗಣಿಯಿಂದ ಮನೆಯನ್ನು ಸಾರಿಸುವನು. ಸೆಗಣಿಯನ್ನು ಒಣಗಿಸಿ ಸುಟ್ಟು ಅದರಿಂದ ಬಂದ ಭಸ್ಮವನ್ನು ಧರಿಸುವನು. ಪ್ರಾಣಿಗಳ ನರ, ಚರ್ಮಗಳನ್ನು ಮುಟ್ಟದೆ ಶಿವಭಕ್ತರು ನೂತ ನೂಲಿನಿಂದ ಸಿದ್ಧವಾದ ವಸ್ತ್ರವನ್ನು ಧರಿಸುವನು. ತನ್ನ ಮನೆಗೆ ಬೇಕಾದ ಪಾತ್ರೆಯನ್ನು ತನ್ನ ಮನೆಯಲ್ಲಿಯೇ ಸಿದ್ಧ ಮಾಡಿ ಲಿಂಗಮುದ್ರೆಯನ್ನು ಅದಕ್ಕೆ ಒತ್ತುವನು, ನೀರುತುಂಬಿದ ಪಾತ್ರೆಯ ಮೇಲೆ ವಸ್ತ್ರವನ್ನು ಹೊದಿಸುವನು. ಮೈಮೇಲಿನ ಹಾಗೂ ಇಷ್ಟಲಿಂಗದ ಮೇಲಿನ ವಸ್ತ್ರ ವನ್ನು ಕಳೆದು, ತುಂಬಿದ ಭಾವಿಯ ನೀರಿನಲ್ಲಿ ಅವನ್ನು ತೊಳೆಯುವನು. ಪ್ರಾಣಿ ಗಳ ಮಾಂಸ ಶಿವನಿಗೆ ಸಲ್ಲದು. ನಿರ್ಮಲವಲ್ಲದ ಚರ್ಮದ ಪಾದರಕ್ಷೆಯನ್ನು ಶಿವನ ಭಕ್ತರು ಧರಿಸಬಾರದ ಕಾರಣ ತೊಡದಿರುವನು. ಚೆನ್ನಾಗಿ ಬೆಳೆದ ತಮ್ಮ ತೋಟಕ್ಕೆ ಭವಿಯದೃಷ್ಟಿ ತಾಗದ ರೀತಿಯಲ್ಲಿ ಮರೆಮಾಡಿ, ಭಾವಿಯ ನೀರನ್ನು ಶಿವನ ಸೊಮ್ಮೆಂದು ಭಾವಿಸಿ ಹಾಯಿಸುವನು. ಭಕ್ತರಿರುವ ಗ್ರಾಮದಲ್ಲಿ ವಾಸವಿದ್ದು, ಅವರ ಭೂಮಿಯನ್ನು ಮಾತ್ರ ಕ್ರಯಕ್ಕೆ ಪಡೆದು ಅದಕ್ಕೆ ಲಿಂಗಮುದ್ರೆಯ ಗಡಿ ಕಲ್ಲನ್ನು ಹಾಕಿಸುವನು. ಲಿಂಗದ ಮುದ್ರೆಯನ್ನು ಬಸವನಿಗೆ, ಭಾವಿಗೆ, ಭೂಮಿಯ ಗಡಿಗೆ ಹಾಕಿಸುವನು. ಚರ್ಮದ ವಸ್ತುಗಳನ್ನು ಅಂಗೀಕರಿಸದೆ ವರ್ಜಿಸುವನು. ಗುರುಲಿಂಗ ಜಂಗಮವನ್ನು ಶಿವನೆಂದೇ ಭಾವಿಸಿ, ಅವರ ಅನುಗ್ರಹವನ್ನು ಪಡೆದು, ಅವರ ಮಾತು ಶಿವವಾಕ್ಯವೆಂದೇ ಸ್ವೀಕರಿಸಿ ಇರುವನು. ಭವಿಯೊಡನೆ ಕೊಳು ಕೊಡೆ ವ್ಯವಹಾರ ಮಾಡುವುದಿಲ್ಲ. ಭವಿಯೊಡನೆ ನಂಟುತನ ಮಾಡುವುದಿಲ್ಲ. ಭವಿಯ ಕೈಯಿಂದ ತಂದ ಪದಾರ್ಥ ಶಿವಭಕ್ತರಿಗೆ ಸಲ್ಲವು[14] ಭವಿಯು ಮುಟ್ಟಿದ್ದೆಲ್ಲ ಮೈಲಿಗೆ. ಹೀಗೆ ಭವಿಯನ್ನು ಲಿಂಗವಂತನು ಬಿಟ್ಟಿರುವನು. ಭವಿ ಶಬ್ದ, ಭವಿಯ ಹೊಗಳಿಕೆ, ಭವಿದೈವ, ಭವಿಯ ಸ್ಪರ್ಶ ಇವೆಲ್ಲ ವರ್ಜ್ಯ, ಭವಿಯ ಸಂಪರ್ಕ ಪಾಪವೆಂದು ಭಾವಿಸುವನು. ಭವಿಯ ನೆರೆ, ಭವಿಯ ಮನೆ, ಭವಿಯ ಬೆಳಸು, ಭವಿಯ ಹೊಗ ಳಿಕೆ, ಭವಿಯ ನೋಟ, ಭವಿಯೊಡನೆ ಕೂಟ ಸಲ್ಲದೆಂದು ಬಿಡುವನು.

ಶಿವನ ಭಕ್ತನು ಶಿವನೇ ಘನವೆಂದು, ಶಿವಮಂತ್ರ-ಶಿವಾನುಭವವೇ ಘನವೆಂದು ಶಾಸ್ತ್ರಮುಖದಿಂದ ಮತ್ತು ಗುರುಮುಖದಿಂದ ಕೇಳಿ, ಪ್ರತ್ಯಕ್ಷ ಕಂಡು ಇತರರಿಗೆ ಅದನ್ನು ವಿವರಿಸುವನು. ಜಾತಿ ಸೂತಕ, ಜನನ ಸೂತಕ, ಪ್ರೇತ ಸೂತಕ, ಕಟ್ಟು ಕಟ್ಟಲೆಗಳ ಸೂತಕ-ಇವುಗಳನ್ನು ಬಿಟ್ಟು ಶಿವಪರವಾದ ಧೋರಣೆಯಿಂದಿರುವನು. ಪರಧನ, ಪರಸ್ತ್ರೀ, ಪರಗೃಹ, ಪರರಕ್ಷೇತ್ರ, ಅನ್ಯರ ಮನೆಯ ನೀರು - ಇವುಗಳು ಸ್ವೀಕಾರಾರ್ಹವಲ್ಲವೆಂದು ಸರಿದುಬಿಡುವನು. ಕಾಮಿಸಿ, ಕಲ್ಪಿಸಿ, ನೇಮಿಸಿ, ಭಾವಿಸಿ, ಭಜಿಯಿಸಿ ಇರುವ ಲಿಂಗದಲ್ಲಿ ತಾಮಸಭಾವನೆಯನ್ನು ಬಿಟ್ಟಿರುವನು. ಶಿವನ ಕುಲ ದಲ್ಲಿ ಬಂದವನೆ ಭಕ್ತನೆಂದೂ, ಶಿವಭಕ್ತರೆ ತನಗೆ ತಂದೆ-ತಾಯಿಗಳೆಂದೂ ಭಾವಿಸಿ ಶಿವ

ಭಕ್ತಿಮಾರ್ಗದಲ್ಲಿ ನಡೆಯುವನು. ಭಕ್ತರಲ್ಲಿ ಸರಸವಾಡದೆ, ಭಕ್ತರು ಅವಗುಣಗಳೆಂದು ದೋಷಾರೋಪ ಮಾಡದೆ, ಭಕ್ತರ ಮನಸ್ಸಿಗೆ ನೋವನ್ನುಂಟುಮಾಡದೆ ಭಕ್ತರ ಮನೆಮಗನಾಗಿರುವನು. ಭಕ್ತರೊಡನೆ ವಾದಿಸುವುದಿಲ್ಲ, ಭಕ್ತರನ್ನು ಬೇಡಿ ಕಾಡುವುದಿಲ್ಲ. ಭಕ್ತರು ತನಗೆ ಸಮನೆನ್ನುವುದಿಲ್ಲ, ಶುದ್ಧ ಭಕ್ತಿಯಲ್ಲಿ ಭೃತ್ಯಭಾವದಲ್ಲಿರುವನು. ನಾಯಿ, ಹಂದಿ, ಕೋಳಿ, ಬೆಕ್ಕು. ಇಲಿ-ಇವಾವ ಪ್ರಾಣಿಗಳೂ ತನ್ನ ಮನೆಯನ್ನು ಪ್ರವೇಶಿಸದಂತೆ ಎಚ್ಚರಿಕೆಯಿಂದಿರುವನು. ದೇಹವನ್ನು ರೋಗ ಆವರಿಸಿದರೆ ಆದರ ಪರಿಹಾರಕ್ಕೆ ನಾರು ಬೇರು ಮಣಿ ಮಂತ್ರಗಳನ್ನು ಬಳಸುವುದಿಲ್ಲ, ಅವನ್ನು ಮನಸಾ ನೆನೆಯುವುದಿಲ್ಲ. ವಾರ, ತಿಥಿ, ಲಗ್ನ, ಶುಭದಿನ, ತಾರಾಬಲ, ಚಂದ್ರಬಲ, ನವಗ್ರಹಬಲವನ್ನೂ, ಶುಭ ಅಶುಭ ಶಕುನವನ್ನೂ ನಿರೀಕ್ಷಿಸುವುದಿಲ್ಲ. ಶಿವರಾತ್ರಿ, ಸಂಕ್ರಾಂತಿ, ಮಂಗಳವಾರ, ಒಪ್ಪೊತ್ತು, ಉಪವಾಸ– ಇವು ಶಿವಪಥಕ್ಕೆ ಸಲ್ಲವು ಎಂದು ಬಗೆದು ಅವನ್ನು ಸಂಪೂರ್ಣವಾಗಿ ವರ್ಜಿಸುವನು. ಗುರು-ಲಿಂಗ-ಜಂಗಮಗಳಿಗೆ ಕ್ರಮವಾಗಿ ತನು-ಮನ-ಧನವನ್ನು ವಂಚನೆಯಿಲ್ಲದೆ ಶುದ್ಧ ಮನದಿಂದ ಅರ್ಪಿಸುವನು. ಪಾಪನಿವಾರಣೆಗಾಗಿ ತೀರ್ಥಕ್ಷೇತ್ರಗಳಿಗೆ ಹೋದದ್ದೇ ಆದರೆ ನರಕಕ್ಕೆ ತಾನೇ ಮುಂದಾಗಿ ಹೋದಂತೆ. ಆದಕಾರಣ ತೀರ್ಥ ಕ್ಷೇತ್ರಗಳಿಗೆ ಹೋಗಲಾರನು. ಯಾರಿಗೂ ಉಪದೇಶ ಕೊಡದೆ, ಪರಾತ್ಪರ ವಸ್ತುವಿನಲ್ಲಿ ಮನಸ್ಸನ್ನು ನಿಲ್ಲಿಸುವನು. ಜಂಗಮ ಸೇವೆಯಲ್ಲಿ ಸ್ವಾರ್ಥ-ನಿಸ್ವಾರ್ಥಗಳೆರಡನ್ನೂ ಬಿಟ್ಟು, ಭಕ್ತನಾಗಿ ಸಹಜವೆನ್ನುವಂತೆ ಸೇವೆಯಲ್ಲಿ ನಿರತನಾಗುವನು. ತನ್ನ ಸಮಶೀಲದ ಒಡೆಯರು ಸಂತೋಷದಿಂದ ಪ್ರಸಾದ ಸ್ವೀಕರಿಸುತ್ತಿರುವಾಗ ಪ್ರಾಣಬಿಟ್ಟರೆ, ಅವರೊಡನೆ ತಾನೂ ಪ್ರಾಣ ಬಿಡಲು ಸನ್ನದ್ಧನಾಗುವನು.

ಲಿಂಗವಂತನು ಇತರರನ್ನು ಕಣ್ಣುಮುಚ್ಚಿ ಅನುಸರಿಸದೆ, ಮನಸ್ಸನ್ನು ಲೌಕಿಕದ ಆಕರ್ಷಣೆಗೆ ಒಳಗಾಗಿಸದೆ ತನು-ಮನದ ಆಸೆಯನ್ನೇ ಪ್ರಧಾನವಾಗಿಸಿ ಪೂರೈಸತೊಡಗದೆ ನೆನಹನ್ನು ನಿಸ್ಸಂಗಿಯಾಗಿಸಲು ಪ್ರಯತ್ನಿಸುವನು. ತನುವಿಗೆ ಹಾಗೂ ಮನಸ್ಸಿಗೆ ಪ್ರಾಣರೂಪವಾದ ಆಚಾರವು ಜಂಗಮವೆಂದು ಭಾವಿಸಿ 'ಅನುಭಾವ'ದಲ್ಲಿ ಲೀನನಾಗುವನು. ಕಾಲಕಲ್ಪಿತಗಳನ್ನು ಬಿಟ್ಟು, ಮುಖ್ಯವೆನ್ನಿಸಿರುವ ಪುಣ್ಯಪಾಪಗಳನ್ನು ನಿರಾಧಾರವೆಂದು ತಿರಸ್ಕರಿಸಿ ವೈಚಾರಿಕ ಪ್ರಜ್ಞೆಯನ್ನು ಬದುಕಿನಲ್ಲಿ ಅಳವಡಿಸಿಕೊಂಡಿರುವನು. ಜಿಹ್ವಾಚಾಪಲ್ಯವಿಲ್ಲದೆ, ನಾಲಗೆಯಲ್ಲಿ ಕೆಟ್ಟಮಾತೇನನ್ನೂ ನುಡಿಯದೆ, ಅನ್ಯರ ನಾಲಗೆ ನುಡಿದ ಕಾರ್ಯವನ್ನು ಮಾಡಲು ಹೊರಡದೆ ತನ್ನ ನಾಲಗೆಯನ್ನೇ ಶಿವನಿಗೆ ಮೀಸಲು ಮಾಡುವನು. ಭವಿಯ ಮಾತುಗಳೇನನ್ನೂ ಕೇಳನು. ಭವಿಯು ಹೇಳುವ ಕಾವ್ಯವನ್ನು ಆಲಿಸನು. ಭವಿಯ ಸಂಪರ್ಕ ಮಾಡದಿರುವುದರಿಂದ ಭವ ಘೋರದಲ್ಲಿ ಬೀಳದಿರುವನು. ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ಸದಾ ಶಿವಲಿಂಗವಲ್ಲದೆ ಅನ್ಯವನರಿಯನು. ಬೇರೆಡೆ ನೆನಹೂ ಇಲ್ಲದವನು.

ಉದಯಾಸ್ತಮಾನಗಳನ್ನು, ಚಂದ್ರಸೂರ್ಯರ ಬೆಳಗೆಲ್ಲವನ್ನು ಶಿವನ ಪ್ರಜ್ವಲಿಸುವ ಬೆಳಗಿನಲ್ಲಿ ಕಾಣುವನು. ತನ್ನ ಎಲ್ಲೆಯೊಳಗೆ ಶಿವನನ್ನು ಅತಿಶಯವಾಗಿ ಹಾಡಿ, ಪೂಜಿಸಿ, ಪರರ ಸೇವೆಯನ್ನು ಬಿಟ್ಟು ಇರುವನು. ಪಂಚೇಂದ್ರಿಯಗಳಲ್ಲಿ ಒಂದೊಂದೂ ತನ್ನತ್ತ ಸೆಳೆಯುತ್ತಿರಲು ಅವುಗಳಿಚ್ಛೆಗೆ ಒಳಗಾಗದೆ ಮನಸ್ಸನ್ನು ಶಿವನ ನೆನಹಿನಲ್ಲಿ ಸಂಧಿಸಿರುವನು. ಅರಿಷಡ್ವರ್ಗಗಳನ್ನ ತ್ಯಜಿಸಿ ಶಿವತತ್ವದಲ್ಲಿ ಮನಸ್ಸನ್ನು ಲಯಗೊಳಿಸಿರುವನು. ಕಸ್ತೂರಿ, ಕರ್ಪೂರ, ಪುಣಗು, ಜವಾದಿ, ಕುಂಕುಮ ಇವೇ ಮೊದಲಾದ ಹಚ್ಚಿಕೊಳ್ಳುವ ಸುಗಂಧದ್ರವ್ಯಗಳನ್ನು ಶಿವಧರ್ಮಿಗೆ ನಿಯಮಬಾಹಿರವೆಂದು ಬಿಟ್ಟು ಸ್ಥಿರಮನದಿಂದಿರುವನು. ಶಿವನ ಉರಿಗಣ್ಣಿಂದ ಹೊರಬಂದುದು, ಆಭರಣಗಳಲ್ಲೆಲ್ಲ ಮಿಗಿಲಾದುದು, ಪರಶಿವನೇ ಆಗಿರುವುದು ರುದ್ರಾಕ್ಷಿ–ಎಂಬ ಭಾವನೆಯಿಂದ ಸಂತಸಯುಕ್ತನಾಗಿ ಅದನ್ನು ಧರಿಸುವನು. ಎಲ್ಲರಲ್ಲೂ ಶಿವನಿರುವುದಿಲ್ಲ, ಸದ್ಭಕ್ತರಲ್ಲಿ ಇರುವನೆಂಬುದನ್ನು ಶಾಸ್ತ್ರಗಳ ಮೂಲಕ ತಿಳಿಸುವನು.

ಲಿಂಗವಂತನು ದಶವಿಧ ಪಾದೋದಕ, ಏಕಾದಶ ಪ್ರಸಾದ ಇವುಗಳ ಬಗೆಗೆ ಇತರರಿಗೆ ವಿವರಿಸುವನು. ಆಯತ ಸ್ವಾಯತ ಹಾಗೂ ಸನ್ನಿಹಿತಗಳೆಂಬ ತ್ರಿವಿಧ ಗಳಲ್ಲಿ ವರ್ತಿಸಿ ಅವುಗಳಿಗೆ ವಶನಾಗಿರುವನು. ಪುರುಷಾರ್ಥಗಳನ್ನು ಆಶ್ರಯಿಸದ, ಕಾಮ್ಯಾದಿ ಫಲಪದಗಳನ್ನು ಬಯಸದೆ ಅಹಂಕಾರ ವರ್ಜಿತನಾಗಿ ಪರಮಾತ್ಮನಲ್ಲಿ ಮನಸ್ಸನ್ನು ನಿಲ್ಲಿಸುವನು. ಪಂಚೇಂದ್ರಿಯಗಳಿಗೆ ಮನಸ್ಸನ್ನು ಹರಿಯಬಿಡದೆ ಶಿವಲಿಂಗದಲ್ಲಿ ಮನಸ್ಸನ್ನು ನಿಲ್ಲಿಸುವನು. ಷಟ್‌ಸ್ಥಲಜ್ಞಾನಿಯಾಗಿ ಲಿಂಗಾಂಗ ಸಾಮರಸ್ಯವನ್ನು ಹೊಂದಿ ಸುಖಿಸುವನು. ಕಾಮಿಸುವುದು ಕಾಯಭೋಗ, ಕಾಮಿಸದಿರುವುದು ಲಿಂಗಭೋಗವೆಂದು ತಿಳಿದು ಕಾಮಿತ ಕಲ್ಪಿತಗಳನ್ನು ಬಿಟ್ಟು ಪ್ರೇಮದಿಂದಿರುವನು. ಮತಿ, ಶ್ರುತಿ, ಮನಃಪರಿಯಯ, ಅತಿಜ್ಯೋತಿ ಹಾಗೂ ಕೇವಲ ಎಂಬ ಐದು ಜ್ಞಾನಗಳನ್ನು ಚೆನ್ನಾಗಿ ತಿಳಿದು ಕ್ಷೇಮದಿಂದಿರುವನು. ತ್ರಿಕಾಲಗಳಲ್ಲೂ ಶಿವನನ್ನು ಪ್ರೀತಿಯಿಂದ ಅರ್ಚಿಸುವನು. ಪರಬ್ರಹ್ಮವಾದ ಲಿಂಗ ವನ್ನು ಆಶ್ರಯಿಸಿ ಲಿಂಗ ಪ್ರಸಾದವಲ್ಲದೆ ಮತ್ತೇನನ್ನೂ ಹೊಂದದೆ ನಾನು ನೀನೆಂಬ ದ್ವೈತಭಾವವನ್ನು ನೀಗಿ ಅದ್ವೈತ ಸ್ಥಿತಿಯಲ್ಲಿ ನಿಲ್ಲುವನು. ಜಪತಪಗಳೇನನ್ನೂ ಮಾಡದೆ ಲಿಂಗಾಂಗ ಸಾಮರಸ್ಯದ ಅಪರಿಮಿತವಾದ ಆನಂದ ಸ್ಥಿತಿಯೊಳಗೆ ನಿಂತು ಶಿವನೊಳಗೆ ಮನಸ್ಸನ್ನು ಬೆರೆಯಿಸುವನು.

ಮೇಲೆ ತಿಳಿಸಲಾದ ಆಚಾರ ಸಂಹಿತೆಗಳೆಲ್ಲಾ ಬಸವಪೂರ್ವದ ವೀರಶೈವ ಸಾಮಾಜಿಕ ಜೀವನವನ್ನು ಪ್ರತಿನಿಧಿಸುತ್ತದೆಂದು ಭಾವಿಸಿದರೆ ತಪ್ಪಾಗುತ್ತದೆ. ಕೊಂಡಗುಳಿ ಕೇಶಿರಾಜ ನಿರೂಪಿಸುವ 64 ಶೀಲಗಳ ಮೂಲಕ ನಾವು ಅಂದಿನ ಸಾಮಾಜಿಕ ಜೀವನ ವಿಧಾನವನ್ನು ತಿಳಿಯಲು ಪ್ರಯತ್ನಿಸುತ್ತಿದ್ದೇವೆ. ಕೇಶಿರಾಜ

ಹೇಳುವ 64 ಶೀಲಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಇವುಗಳಲ್ಲಿ ಅಂದು ಪ್ರಚಲಿತವಿದ್ದ ಪುದುವಾದ (General) ಸಾಮಾಜಿಕ ಆಚರಣೆ ಹಾಗೂ ವೈಯಕ್ತಿಕ ನಂಬಿಕೆಗಳಿಗೆ ಬದ್ಧವಾದ ಆಚರಣೆ–ಹೀಗೆ ಎರಡು ರೂಪಗಳನ್ನು ಕಾಣುತ್ತೇವೆ. ಮೊದಲನೆಯದು, ಆ ಕಾಲದ ವೀರಶೈವ ಸಮಾಜದ ಸಾರ್ವತ್ರಿಕವಾದ ಆಚರಣೆಗೆ ಹಾಗೂ ಬಸವಾದಿ ಶರಣರು ತಮ್ಮ ವಚನಗಳಲ್ಲಿ ಪ್ರತಿಪಾದಿಸಿರುವ ಸೋಪಜ್ಞತೆಯುಳ್ಳ ಜೀವನ ಮೌಲ್ಯಗಳಿಗೆ ತೀರ ಹತ್ತಿರವಾದುದು. ಎರಡನೆಯದು, ಕೊಂಡಗುಳಿ ಕೇಶಿರಾಜನ ಖಾಸಗಿಯಾದ ನಂಬಿಕೆಗಳು. ಇವು ಮೊದಲನೆಯ ರೂಪದಿಂದ ಭಿನ್ನವಾಗಿವೆ. ಕೊಂಡಗುಳಿ ಕೇಶಿರಾಜನದು ಬಸವಾದಿ ಶರಣರ 'ಧರ್ಮ' ಅಥವಾ 'ಜಾತಿ' ಗಿಂತ ಸ್ವಲ್ಪ ಭಿನ್ನವಾದುದು.

ಅರವತ್ತುನಾಲ್ಕು ಶೀಲವನ್ನು ತಮ್ಮ ಬದುಕಿನಲ್ಲಿ ಕಟ್ಟುನಿಟ್ಟಾಗಿ ಆಚರಣೆಗೆ ತಂದವರು ತಮ್ಮನ್ನು 'ಶೀಲವಂತ'ರೆಂದು ಕರೆದುಕೊಂಡರೋ, ಇಲ್ಲವೇ ಬಿಗಿಯಾದ ಆಚರಣೆಗಳನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಂಡು ಸಮಾಜದ ಕಣ್ಣಿಗೆ 'ಮಡಿವಂತ'ರೆಂದು ಕಾಣಿಸಿದ ಇವರನ್ನು ಇತರರು 'ಶೀಲವಂತ'ರೆಂದು ಕರೆದರೋ ತಿಳಿಯದು. ಬಸವನ ಕಾಲಕ್ಕೆ ಶೀಲವಂತರು ಹಾಗೂ ಅವರ ಆಚರಣೆಗಳು ಪರಿಚಿತವಿದ್ದಿರಬೇಕು. ಶೀಲವಂತರ ಉಲ್ಲೇಖ ಪ್ರಭು, ಚನ್ನಬಸವಣ್ಣ, ಸಕಳೇಶ ಮಾದರಸ, ಅಂಬಿಗರ ಚೌಡಯ್ಯ (ವ. 221) ಮೊದಲಾದ ವಚನಕಾರರ ವಚನಗಳಲ್ಲಿ ಕಾಣಬರುತ್ತದೆ. ಚೆನ್ನಬಸವಣ್ಣನ ಪ್ರಕಾರ ಬಸವಣ್ಣನು 'ಅಱುವತ್ತುನಾಲ್ಕು ಶೀಲದಲ್ಲಿ ನಡೆದು ತೋಱಿದ'ವನು (ಚೆಬವ 460). ಭೀಮಕವಿಯ 'ಬಸವಪುರಾಣ'ದಲ್ಲಿ ಬಸವನು ತಾನು ಭೂಲೋಕಕ್ಕೆ ಬಂದ ಉದ್ದೇಶವನ್ನು ಯಶಸ್ವಿಗೊಳಿಸಲು ಕೆಲವು ಭಾಷೆಗಳನ್ನು ಕೈಗೊಂಡನೆಂದು ಹೇಳಿ, ಬಸವಣ್ಣನ ಮೂವತ್ತಮೂರು ಭಾಷೆಗಳನ್ನು ಹೆಸರಿಸಲಾಗಿದೆ (ನೋಡಿ: ಬಸಪು ಸಂ. 6 ಪ. 1–7). ಕೊಂಡಗುಳಿ ಕೇಶಿರಾಜ ಹೇಳುವ ಅರುವತ್ತುನಾಲ್ಕು ಶೀಲಗಳಿಗೂ ಬಸವಪುರಾಣದಲ್ಲಿ ಹೇಳಲಾಗಿರುವ ಬಸವನ ಭಾಷೆಗಳಿಗೂ ಹೋಲಿಸಿ ನೋಡಿದಾಗ ಹೆಚ್ಚಿನ ವ್ಯತ್ಯಾಸ ತೋರುತ್ತಿಲ್ಲ. ಬಸವಣ್ಣನ ವಚನಗಳಲ್ಲಿ ಒಂದೇ ವಚನಗಳಲ್ಲಿ ಹಲವಾರು 'ಭಾಷೆ' ಅಥವಾ 'ಶೀಲ'ಗಳೂ, ಮತ್ತೆ ಕೆಲವು ವಚನಗಳಲ್ಲಿ ಬಿಡಿಬಿಡಿಯಾಗಿ ಈ 'ಭಾಷೆ' ಅಥವಾ 'ಶೀಲ'ಗಳೂ ಬಂದಿವೆ. ಪ್ರಯತ್ನಪಟ್ಟರೆ ಬಸವಣ್ಣನ ವಚನಗಳಲ್ಲಿ ಈ 64 ಶೀಲಗಳನ್ನು ಗುರುತುಮಾಡಿ ಹೇಳಬಹುದು. ಬಸವಣ್ಣನಂತೆಯೇ ಚೆನ್ನಬಸವಣ್ಣ, ಸಿದ್ಧರಾಮ ಮೊದಲಾದ ವಚನಕಾರರೂ ತಮ್ಮ ವಚನಗಳಲ್ಲಿ 'ಶೀಲ'ಗಳ ಬಗೆಗೆ ಹೇಳಿರುವರು.

* ಈಗ ವೀರಶೈವ ಜನಾಂಗದಲ್ಲಿ 'ಶೀಲವಂತ'ರೆಂಬ ಉಪಪಂಗಡವೇ ಇದೆ. ವೀರಶೈವ ಜನಾಂಗದಲ್ಲಿ ತಮ್ಮದು ಶ್ರೇಷ್ಠ ಪಂಗಡ; ತಾವೇ ನಿಜವಾದ ವೀರಶೈವರು; ತಮ್ಮ ಆಚರಣೆಗಳು ಪವಿತ್ರವಾದುವು ಎಂಬ ನಂಬುಗೆಯನ್ನು ಅವರು ಹೊಂದಿರುವರು.

ವಚನಕಾರರ ವಚನಗಳಲ್ಲಿ ಶೀಲವಂತರ ಬಗೆಗೆ ಆಡಿರುವ ಮಾತುಗಳನ್ನು ಗಮನಿಸಿದಾಗ ಶೀಲವಂತರ ಕಟ್ಟುನಿಟ್ಟಿನ ಆಚರಣೆಗಳ ಬಗೆಗೆ, ನುಡಿದಂತೆ ನಡೆಯದ ಶೀಲವಂತರ ಬಗೆಗೆ ವಿರೋಧದ ದನಿ ಕೇಳಬರುತ್ತದೆ. ಭಾಷೆ ತೊಡುವ, ವ್ರತ–ನೇಮಗಳನ್ನು ಬಿಗಿಯಾಗಿ ದೈನಂದಿನ ಜೀವನದಲ್ಲಿ ಅನುಸರಿಸುವ ಶೀಲವಂತರು ಪ್ರಭುವಿನ ಕಟುಟೀಕೆಗೆ ಒಳಗಾಗಿರುವರು (ನೋಡಿ : ಅಪ್ರುವ 326, 327–358) ಪ್ರಭುವಿನ ಪ್ರಕಾರ 'ಶೀಲವೆಂಬುದು ಸಂಕಲ್ಪ' (ಅಪ್ರುವ 524) ; 'ಶೀಲವೆಂಬುದು ಸೂತಕ* (ಅಪ್ರುವ 107). ಚೆನ್ನಬಸವಣ್ಣನ ವಚನಗಳಲ್ಲಿ ಶೀಲವಂತರ ಬಗೆಗಿನ ವಿರೋಧ ಇನ್ನಷ್ಟು ಕಟುವಾಗಿ ತೋರುತ್ತದೆ. ಚೆನ್ನಬಸವಣ್ಣ ಹಾಗೂ ಅಂಬಿಗರ ಚೌಡಯ್ಯ ತಮ್ಮಕಾಲದ ಶೀಲವಂತರು ಶೀಲ ಶೀಲ ಎಂದು ಹೇಳುತ್ತ ಆಚರಣೆಯಲ್ಲಿ 'ಪುರೋಹಿತ ವರ್ಗ'ದ ಮಡಿವಂತಿಕೆ ತಂದು, ಬಸವ ಹಾಗೂ ಅವನ ಸಮಕಾಲೀನ ಶರಣರ ಮೂಲಭೂತ ಧೋರಣೆಗಳಿಗೆ ವ್ಯತಿರಿಕ್ತವಾಗಿ ತಮ್ಮದೇ ಆದ ಒಂದು 'ವರ್ಗ' ನಿರ್ಮಿಸಹೊರಟುದನ್ನು ನೋಡಿ ನೊಂದು ಉಗ್ರವಾಗಿ ಅವರನ್ನು ಟೀಕಿಸಿದಂತಿದೆ. ಶ್ರೀಮಂತರ ಆಚರಣೆಗಳನ್ನೇ ಗಮನದಲ್ಲಿಟ್ಟುಕೊಂಡು ಚೆನ್ನಬಸವಣ್ಣ ಅವರನ್ನು ತೀವ್ರವಾಗಿ ವಿರೋಧಿಸುವನು :

"ನದಿ ಕೂಪ ತಟಾಕ ಜಲಾಶಯದಲ್ಲಿ ಅಗ್ಗಿಣಿಯ ತಂದು
ಮಜ್ಜನಕ್ಕೆ ನೀಡುವರೆಲ್ಲ ಶೀಲವಂತರೆ ?
ಪಾಕದಲ್ಲಿ ಪರಪಾಕ, ಭವಿಪಾಕ ಎಂಬವರೆಲ್ಲ ಶೀಲವಂತರೆ ?
ತಳಿಗೆ ಬಟ್ಟಲ ಪ್ರಗಾಳಿಸಿ ನೇಮವ ಮಾಡಿಕೊಂಬವರೆಲ್ಲ ಶೀಲವಂತರೆ ?
ಕಂಠಪಾವಡ, ಧೂಳಿಪಾವಡ, ಸರ್ವಾಂಗಪಾವಡವೆಂಬವರೆಲ್ಲ ಶೀಲವಂತರೆ ?
ಅದೇನು ಕಾರಣವೆಂದಡೆ :
ಅವರು "ಸಂಕಲ್ಪ ಚ ವಿಕಲ್ಪಂ ಚ......" ಎಂದುದಾಗಿ ಶುದ್ಧ ಭವಿಗಳು.
ಭವಿ ಎಂಬವನೆ ಶ್ವಪಚ ; ವ್ರತಸ್ಥನೆಂಬವನೆ ಸಮ್ಮಗಾಟಿ,
ಶೀಲವಿನ್ನಾವುದೆಂದಡೆ :
ಆಶನ ಅಳಿತು, ವ್ಯಸನ ನಿಂದು,
ವ್ಯಾಪ್ತಿಯಳಿದು, ಅಪ್ಪಮದವೆಲ್ಲ ನಷ್ಟವಾದಲ್ಲದೆ,
ಕೂಡಲ ಚೆನ್ನ ಸಂಗಮ ದೇವರಲ್ಲಿ ಶೀಲವಿಲ್ಲ ಕಾಣರೋ ! (ಚೆಬವ. 518)

ಇದೇ ಧೋರಣೆ ಚೆನ್ನಬಸವಣ್ಣನ ಬೇರೆ ವಚನಗಳಲ್ಲಿ ಕಾಣಬಹುದಾಗಿದೆ (ನೋಡಿ : ಚೆಬವ 594 ; 792 ; 591 ; 593). ಚೆನ್ನಬಸವಣ್ಣ (ವ. 518 ರಲ್ಲಿ) ಹೇಳುವ 'ಕಂಠಪಾವಡ, ಧೂಳಿಪಾವಡ, ಸರ್ವಾಂಗಪಾವಡವೆಂಬವರೆಲ್ಲ

* ಚನ್ನಬಸವಣ್ಣನೂ ಇದೇ ಮಾತನ್ನು ಬಳಸಿರುವನು, ನೋಡಿ ಚೆಬವ. 1170 ; 'ಶೀಲವಂತನಱಿವು ಸೂತಕದಲ್ಲಿ ಹೋಯಿತ್ತು' (ಚೆಬವ. 1099)

ಶೀಲವಂತರೆ ?' ಎನ್ನುವ ಮಾತು ಅಲ್ಲಮಪ್ರಭುದೇವರ ವಚನದಲ್ಲೂ ಬರುತ್ತದೆ– ಇದೇ ಧೋರಣೆ ಚೆನ್ನಬಸವಣ್ಣನ ಬೇರೆ ವಚನಗಳಲ್ಲೂ ಕಾಣಬಹುದಾಗಿದೆ (ನೋಡಿ : ಚೆಬವ. 594 ; 192 ; 591; 593). ಚೆನ್ನಬಸವಣ್ಣ (ವ. 518 ರಲ್ಲಿ) ಹೇಳುವ 'ಕಂಠಪವಾಡ, ಧೂಳಿಪವಾಡ, ಸರ್ವಾಂಗ ಪಾವಡವೆಂಬವರೆಲ್ಲ ಶೀಲ ವಂತರೆ ?' ಎನ್ನುವ ಮಾತು ಅಲ್ಲಮ ಪ್ರಭುದೇವರ ವಚನದಲ್ಲೂ ಬರುತ್ತದೆ— ಚೆನ್ನಬಸವಣ್ಣನ ಮಾತಿಗಿಂತ ಇನ್ನಷ್ಟು ಮೊನಚಾಗಿ (ನೋಡಿ : ಅಪ್ರವ. 1035). ಅರಿಷಡ್ವರ್ಗಗಳಿಂದ ಮುಕ್ತರಾಗದೆ ಅವುಗಳ ಬಂಧಿಯಾದವರನ್ನು ಶೀಲವಂತರೆನ್ನು ವುದಾದರೂ ಹೇಗೆ ? ಅರಿಷಡ್ವರ್ಗ ವಶರಾದ ಶೀಲವಂತರನ್ನು ಹಲವು ವಚನಗಳಲ್ಲಿ ಚೆನ್ನಬಸವಣ್ಣ ಕಡೆನುಡಿದಿರುವನು (ನೋಡಿ : ಚೆಬವ. 496 ; 592). ಶೀಲವಂತ ತನ್ನ ಮನೆ, ಒಲೆ, ಅಡಿಗೆಮಾಡುವ ಮಡಕೆ, ಕೆರೆ, ಬೆಳೆ ಇವುಗಳಿಗೆ 'ಶೀಲ'ದ ಕಟ್ಟು ಹಾಕುವನು, ಆದರೆ ಕಟ್ಟಿಗೆ ಒಳಪಡದ ಮನಸ್ಸನ್ನು ಬಿಗಿಹಿಡಿದು ನಿಲ್ಲಿಸಲಾರನು. ಇದೆಂತಹ ಶೀಲವೆಂದು ಚೆನ್ನಬಸವಣ್ಣ ವ್ಯಂಗ್ಯವಾಡುವನು :

"ಶೀಲ ಶೀಲವೆಂದೇನೋ ?
ಮಾಡಿದ ಮನೆ, ಹೂಡಿದ ಒಲೆ, ಅಟ್ಟುಂಬ ಮಡಕೆ, ಕಟ್ಟಿದ ಕೆಱೆ, ಬಿತ್ತಿದ ಬೆಳೆ
ಇಂತಿವಕೆ ಶೀಲವಲ್ಲದೆ ತನ್ನ ಮನಕೆ ಶೀಲವಿಲ್ಲ.
ಶೀಲವದೆಂತೆಂದಡೆ :
ಲಿಂಗ ಬಂದು ಮನವನಿಂಬುಗೊಂಬುದೆ ಶೀಲ ;
ಜಂಗಮ ಬಂದು ಧನವನಿಂಬುಗೊಂಬುದೆ ಶೀಲ ;
ಪ್ರಸಾದ ಬಂದು ತನುವನಿಂಬುಗೊಂಬುದೆ ಶೀಲ.
ಇಂತಪ್ಪ ಶೀಲಕ್ಕೆ ನಮೋ ನಮೋ ಎಂಬೆ !
ಉಳಿದ ದುಃಶೀಲರನೆನಗೆ ತೋಱದಿರು ಕೂಡಲ ಚೆನ್ನಸಂಗಮದೇವಾ !
(ಚೆಬವ. 589)

ಇದೇ ರೀತಿಯ ಧೋರಣೆ ಸಕಳೇಶ ಮಾದರಸರ ಕೆಳಗಿನ ವಚನದಲ್ಲೂ ಕಂಡು ಬರುತ್ತದೆ :

ಶೀಲ ಶೀಲವೆಂಬರು ಗರ್ಭೀಕೃತವಱಿಯದ ಉದ್ದೇಶಪ್ರಾಣಿಗಳು.
ಇಂತನಂತ ಶೀಲ ಹೂ ಭಾವಿ ವ.ಠಕ್ಕೆ ಸೀಮೆಯ ಮಾಡೂದು ಶೀಲವೆ?
ಮನಕ್ಕೆ ಸೀಮೆಯ ಮಾಡೂದೆ ಶೀಲವಲ್ಲದೆ?
ಹುಸಿಯ ಕಳೆವುದು ಶೀಲವಲ್ಲದೆ, ಭಕ್ತರ ಕಳೆವುದು ಶೀಲವೆ?
ಲಿಂಗ ಪ್ರಾಣವ ಮಾಡೂದು ಶೀಲವಲ್ಲದೆ, ಪ್ರಾಣಲಿಂಗವ ಮಾಡೂದು ಶೀಲವೆ?
ಇಂತೆಲ್ಲಾ ಶೀಲರು ದುಶ್ಶೀಲರು
ಸಕಳೇಶ್ವರದೇವಾ ನಾನೇಂಸೆಂದಱಿಯೆ ನೀನಿರಿಸಿದಂತಿರ್ಪೆ
(ಸಪುವ- ೨ ಪು. 614, ವ.1734)

ಚೆನ್ನಬಸವಣ್ಣ ಹೇಳುವಂತೆ ಶೀಲ ಶೀಲ ಎಂದು ಹೇಳುವ ಶೀಲವಂತರು 'ಉದ್ದೇಶ ಪ್ರಾಣಿಗಳು.' ಅವರು ಅನಂತ ಶೀಲರು; ಅರಿವಿನ ನಿರ್ಣಯವನರಿಯರು; ಹೊರಗನೆ ಬಳಸುವರು, ಒಳಗಣ ಶುದ್ಧಿಯನರಿಯರು; ನೇಮ ಶೀಲವೆಂದು ಹೆಸರಿಡುವರು, ನಿರ್ಣಯವನರಿಯರು (ಚೆಬವ. 849.)

ಜಾತಿಯ ಹೊಲೆ, ಜನನದ ಹೊಲೆಯ ಬಗೆಗೆ ವೈದಿಕ ಭಾವನೆ ಏನಿದ್ದಿತೋ ಅದಕ್ಕೆ ವಿರುದ್ಧವಾಗಿ ಬಸವಾದಿ ಶರಣರ ಭಾವನೆಗಳಿಗೆ ಹತ್ತಿರವಾಗಿ 'ಶಿವಭಕ್ತನೇ ಕುಲಜ'ನೆಂದು ಉದಾತ್ತೀಕರಿಸಿ ಹೇಳುವ ಕೊಂಡಗುಳಿ ಕೇಶಿರಾಜ, ವೈಯಕ್ತಿಕ ಜೀವನದಲ್ಲಿ ಆಚಾರವಂತ, ಹಾಗೆಯೇ ತುಂಬು ನಿಷ್ಠಾವಂತ ಮಡಿವಂತಿಕೆಯಲ್ಲಿ. ತನ್ನ ಮನೆಗೆ ತನ್ನಲ್ಲಿರುವ ಪಶುವಿಗೆ, ನಿತ್ಯ ಬಳಸುವ ವಸ್ತುಗಳೆಲ್ಲಕ್ಕೆ ಶಿವಮುದ್ರೆಯನ್ನು ಒತ್ತುವ; ನಿತ್ಯ ಬಳಸುವ ಭಾವಿಯ ನೀರನ್ನು ಪಾತ್ರೆಯಲ್ಲಿ ತುಂಬಿಟ್ಟು, ಅದರ ಬಾಯಿಗೆ ವಸ್ತ್ರವನ್ನು ಮುಚ್ಚಿ, ಮಂತ್ರದಿಂದ ನೀರನ್ನು ಶುದ್ಧೀಕರಿಸಿ ಅಡುಗೆಗೆ ಬಳಸುವ; ಶಿವನಿಗೆ ಹಸುವಿನ ಹಾಲಲ್ಲದೆ ಎಮ್ಮೆಯ ಹಾಲನ್ನು ಅರ್ಪಿಸದ; ಸಮುದ್ರದ ನೀರಿನಲ್ಲಿ ನಾನಾ ಪ್ರಾಣಿಗಳು ವಾಸಿಸುವುದರಿಂದ, ನಾನಾ ಬಗೆಯ ಜನರು ಅದನ್ನು ತಂದು ಉಪ್ಪನ್ನಾಗಿ ಪರಿವರ್ತಿಸಿ ಮಾರುವರಾದ್ದರಿಂದ ಉಪ್ಪನ್ನೇ ಬಳಸದ; ಚರ್ಮದ ಪಾದರಕ್ಷೆಗಳನ್ನು ಮಡಿಯ ದೃಷ್ಟಿಯಿಂದ ತೊಡದ, ಭವಿಯೊಡನೆ ಸಂಪರ್ಕ, ಭವಿಯ ಹೊಗಳಿಕೆ, ಭವಿಯ ನೋಟ, ಸೋಂಕು, ಭವಿಯ ನೆರೆ, ಭವಿಯ ಬೆಳಸು–ಇವಾವುದಕ್ಕೂ ಇಷ್ಟಪಡದ, ಸುಗಂಧ ದ್ರವ್ಯಗಳನ್ನು ಏನೇ ಆಗಲಿ ಬಳಸದ; ತನ್ನ ಸಮಶೀಲದ ಒಡೆಯರಲ್ಲಿ ಸಂತಸದಿಂದ ಪ್ರಸಾದ ಸ್ವೀಕರಿಸುತ್ತಿರುವಾಗ ಅವರು ಪ್ರಾಣ ಬಿಟ್ಟರೆ ಅವರ ಜೊತೆ ತಾನೂ ಪ್ರಾಣ ಬಿಡುವ ನೈಷ್ಠಿಕ ಆಚರಣೆಗಳು ಕೊಂಡಗುಳಿ ಕೇಶಿರಾಜನದು. ವೈಯಕ್ತಿಕ ಹಾಗೂ ಸಾರ್ವಜನಿಕ ಆಚರಣೆಗಳ ನಡುವೆ ವ್ಯತ್ಯಾಸವೇನನ್ನೂ ಕಾಣದ ಕಾರಣ ಅವೆರಡೂ ಅವನು ನಿರೂಪಿಸಿರುವ 64 ಶೀಲಗಳಲ್ಲಿ ಬೆರೆತುಹೋಗಿವೆ. 'ಶೀಲ' ಎನ್ನುವ ಪದಕ್ಕೆ ಪರ್ಯಾಯ ಅರ್ಥ 'ಆಚರಣೆ'. ಕೇಶಿರಾಜನು ಶಿವನಿಗೆ ಮೆಚ್ಚುಗೆಯಾಗುವ, ಶಿವನ ಪ್ರೀತ್ಯರ್ಥವಾದ 'ಆಚರಣೆ' (ಅ) 'ಆಚಾರ'ಗಳನ್ನು 'ಶೀಲ'ಗಳೆಂದು ಸ್ವೀಕರಿಸಿದಂತಿದೆ. ಭೀಮಕವಿ ಈ 'ಶೀಲ' (ಅ) 'ಆಚರಣೆ'ಗಳಿಗೆ ಪರ್ಯಾಯವಾಗಿ 'ಭಾಷೆ' ಎಂಬ ಮಾತನ್ನು ಬಳಸಿರುವಂತಿದೆ.

ಕೊಂಡಗುಳಿ ಕೇಶಿರಾಜ ಬಸವ ಪೂರ್ವ ಯುಗದ ವೀರಶೈವ ಧರ್ಮವನ್ನು ತನ್ನ ಕೃತಿಗಳ ಮೂಲಕ ಪ್ರತಿನಿಧಿಸಿದಂತೆ, ತನ್ನ ಮುಂದಣ ವಚನಕಾರರ–ಕವಿಗಳ ಮೇಲೆ ತನ್ನ ಪ್ರಭಾವ ಮುದ್ರೆಯನ್ನು ಸ್ಪಷ್ಟವಾಗಿ ಒತ್ತಿರುವನು. ಬಸವಾದಿ ಶರಣರು ನಡೆಸಿದ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯ ಪೂರ್ವ ಚಿಹ್ನೆಯನ್ನು ಕೊಂಡಗುಳಿ ಕೇಶಿರಾಜನ ಕೃತಿಗಳಲ್ಲಿ ಸ್ಪಷ್ಟವಾಗಿ ನಾವು ಕಾಣುತ್ತೇವೆ. ವಚನ

ಚಳುವಳಿಗೆ ಪೂರ್ವ ಸಿದ್ಧತೆಯೊಂದು ಕೇಶಿರಾಜನ ಕಾಲದಲ್ಲಿ ಆದಂತೆ ಕಾಣುತ್ತದೆ. ಅವನ ಕೃತಿಗಳನ್ನು ಓದುತ್ತಿದ್ದಂತೆ ಬಸವಣ್ಣನ ಅನೇಕ ವಚನಗಳ ಭಾವಗಳು ಇಡಿಯಾಗಿ ಇಲ್ಲವೆ ಬಿಡಿಯಾಗಿ ಕಣ್ಣಮುಂದೆ ನಿಲ್ಲುತ್ತವೆ. ಬಹುಪಾಲು ಕೇಶಿರಾಜನ ವಿಚಾರಗಳು ಬಸವಣ್ಣನ ವಚನಗಳಲ್ಲಿ ಪ್ರತಿಫಲಿಸಿವೆ. (ಆವರಿಬ್ಬರೂ ಸಮಾನ ಹೃದಯಿಗಳು, ಸಮಾನ ಮನಸ್ಕರು). ಉದಾಹರಣೆಗೆ ಕೆಲವನ್ನಿಲ್ಲಿ ನೋಡಬಹುದು :

| ಕೊಂಡಗುಳಿ ಕೇಶಿರಾಜ | ಬಸವಣ್ಣ |
|---|---|
| ಮೊಗದ ತರೆ ನೆಗೆದು ನೆರೆಗಳ್<br>ಬಿಗಿದು ಶಿರಂ ನಡುಗಿ ಒಡಿವ ನಡೆವ ಕೈಕಾಲ್<br>ಮಿಗೆಯುಡುಗದೆ ಜವ್ವನಮಂ<br>ಜಗುಳದ ನೆನೆಯೋಂ ನಮಃ ಶಿವಾಯೆಂಬ ಪದಂ ॥ | ನೆರೆ ಕೆನ್ನೆಗೆ ತೆರೆಗಲ್ಲಕೆ ಶರೀರ<br>ಗೂಡುವೋಗದ ಮುನ್ನ...... |
| ಉಪಪಾತಕ ಕೋಟಿಗಳ<br>ತ್ಯಪರಾಧವನಂತಕೋಟಿಯಂ ಮಾಡಿದೊಡೇಂ<br>'ಜಪತೋ ಪಾಪಂ ನಾಸ್ತಿ'<br>ಶ್ವಪಚೋತ್ತಮಗೋಂ ನಮಃ ಶಿವಾಯೆಂಬ ಪದಂ ॥ | ಪಾತಕ ಶತಕೋಟಿಯನೊರೆಸಲು<br>ಸಾಲದೆ ಒಂದು ಶಿವನ ನಾಮ ?<br>ಸಾಲದೆ ಒಂದು ಹರನ ನಾಮ...... |
| ಕರಿಯಂಕುಶಕಂಜುಗುಮಾ<br>ಗಿರಿಯುಂಜುಗು ಕುಲಿಶಕ್ಕೆ ತಮಂಧಂ ಪರಿಗುಂ<br>ಖರಕರಕಿರಣಕ್ಕೆಮಗಂ<br>ಪರಿವೊಡೆ ಪಾಪೋಂನಮಃ ಶಿವಾಯೆಂಬ ಪದಂ ॥ | ಕರಿಯಂಜುವುದಂಕುಶಕ್ಕಯ್ಯಾ ;<br>ಗಿರಿಯಂಜುವುದು ಕುಲಿಶಕ್ಕಯ್ಯಾ ;<br>ತಮಂಧವಂಜುವುದು ಜ್ಯೋತಿಗಯ್ಯಾ<br>........................... |
| ಉರಿಯಾ ಒಲು ಹೊಯ್ಲಿಗಾಂ<br>ತಿರಬಲ್ಲುವೆಯರಗಿಸಲ್ಪ ಬೊಂಬೆಗಳೆಲ್ಲಂ<br>ಪರಮನ ಮಂತ್ರಕ್ಕಖವಾಂ<br>ತಿರಬಲ್ಲುದೆ ? ಓಂ ನಮಃ ಶಿವಾಯೆಂಬ ಪದಂ ॥ | ಅರಗಿನ ಪುತ್ಥಳಿಯನುರಿಯ<br>ನಾಲಗೆ ಹೊಯಿದು<br>ಮಾತಾಡುವ ಸರಸ ಬೇಡ !<br>........................... |
| ಎನ್ನ ಮನವೆಂಬ ಶಕುನಂ<br>ನಿನ್ನಗ್ಗದ ಭಕ್ತಿವನಿತೆ ಒಡಿದೊಯ್ದು ಶಿವಾ<br>ಯೆನ್ನೆಂದೋದಿಸಿ ನಿಜ ಪಾ<br>ದೋನ್ನತ ಪಂಜರದೊಳೆಂದು ಸೆರೆಯಿಟ್ಟಪಳೋ ॥ | ನರವಿಂಧ್ಯದೊಳಗೆನ್ನ ಹುಲುಗಿಳಿಯ<br>ಮಾಡಿ<br>ಸಲಹುತ್ತ 'ಶಿವ ಶಿವಾ'<br>ಎಂದೋದಿಸಯ್ಯಾ.<br>ಭಕ್ತಿಯೆಂಬ ಪಂಜರದೊಳಗಿಕ್ಕಿಸಲಹು,<br>ಕೂಡಲ ಸಂಗಮದೇವಾ. |
| ನೋಡಿ ಕಣ್ ಪಾಡಿ ನಾಲಗೆ<br>ಯಾಡಿ ಪದಂ ಬಿಡದೆಯರ್ಚಿಸುತ್ತಂ ಕರದೊಳ್<br>ಕೂಡಿ ಮನ ನಿಮ್ಮೊಳಿರ್ಪುದ<br>ಮಾಡು ಗಡಾ................. | ಆಡಿ ಕಾಲು ದಣಿಯವು;<br>ನೋಡಿ ಕಣ್ಣು ದಣಿಯವು.<br>ಹಾಡಿ ನಾಲಿಗೆ ದಣಿಯದು ;<br>ಇನ್ನೇವೆಸಿನ್ನೇವೆ |

ನಿಮ್ಮ ಕೈಯಾರೆ ಪೂಜಿಸಿ ಮನ ದಣಿಯ
ಲೊಲ್ಲದಿನ್ನೇವೆನಿನ್ನೇವೆ ?

..........................

ಒಗೆವಶ್ರು ಪುಳಕತತಿಯಿಂ
ದಗಲದೆ ಶಿವ ಶಿವ ಶಿವ ಪ್ರಘೋಷದೊಳೆಂದುಂ
ಪಗಲಿರುಳೆಂಬುದನಱಿಯದೆ
ನೆಗಜಾವಲ್ಲಭನೊಳಾಟುತೆಂದಿರ್ದಪೆನೋ ॥

ವಾರವೆಂದಱಿಯೆ, ದಿನವೆಂದಱಿಯೆ ;
ಏನೆಂದಱಿಯೆನಯ್ಯಾ !
ಇರುಳೆಂದಱಿಯೆ ಹಗಲೆಂದಱಿಯೆ ;
ಏನೆಂದಱಿಯೆನಯ್ಯಾ !
ನಿಮ್ಮುವ ಪೂಜಿಸಿ ಎನ್ನುವ ಮಱೆದೆ
ಕೂಡಲ ಸಂಗಮದೇವಾ.

ಮನವುಡುಗಲ್ತನು ಕರಗ
ಲ್ಕೊನೆದೋಱಿಲ್ ರೋಮರಾಜಿ ಲಿಂಗದೊಳನಿಶಂ
ತನಿನೇಹ ದಿನ ಶ್ರುಜಲಂ
ಜನಿಯಿಸಲಾನೆಂದು ಕಂಡು ಸುಖಿಯಾದಪೆನೋ ॥
ತಡವರಿಸಿ ನೋಡಿ ಕಂಡಾ
ಮೃಡನಿರ್ದಪನೆಂಬ ಭಾವವೆನ್ನೊಳ್ನೆಲಸ
ಲ್ಗುಡುಗುಡನೆ ಸುರಿವ ಕಂಬನಿ
ಮಡುಗಳೊಳೋಲಾಡುತಾನದೆಂದಿರ್ದಪೆನೋ ॥

ಅಂಗೈಯೊಳಗಣ ಲಿಂಗವ ನೋಡುತ್ತ
ಕಂಗಳು ಕಡೆಗೋಡಿವಱಿವುತ್ತ
ಸುರಿಯುತ್ತ ಎಂದಿಪ್ಪೆನೊ ?
ನೋಟವೇ ಪ್ರಾಣವಾಗಿ ಎಂದಿಪ್ಪೆನೊ,
ಕೂಟವೇ ಪ್ರಾಣವಾಗಿ ಎಂದಿಪ್ಪೆನೊ,
ಎನ್ನಂಗವಿಕಾರದ ಸಂಗವಳಿದು,
ಕೂಡಲಸಂಗಯ್ಯಾ, ಲಿಂಗಯ್ಯಾ, ಲಿಂಗ
ಲಿಂಗ ಲಿಂಗವೆನುತ್ತ ?

ನೀವಿರಿಸಿದಂತೆ ಇರಲುಂ
ನೀಂ ಸಲಹಿದೊಲೆನ್ನಯಸುವು ನೀನೆ ಕರ್ತನ್
ನೀನೆ ಭರ್ತನ್ ಹರ್ತನ್
.................................... ॥
ನೀನೆ ಕುಲಂ ನೀನೆ ಧನಂ
ನೀನೆ ಕುಲಸ್ವಾಮಿ[ಯುಂ] ನೀನೆ ದೇವತೆಯುಂ
ನೀನೆ ಕುಲವಿದ್ಯೆ...

...................................................... ॥

ನಾ ನಿಮ್ಮ ನೆನೆವೆನು :
ನೀವೆನ್ನನಱಿಯಿರಿ ;
............ ...............
ನಾನೆಂತು ಬದುಕುವೆನೆಂತು
ಜೀವಿಸುವೆನಯ್ಯಾ ?
ಕೂಡಲ ಸಂಗಮದೇವಾ,
ಎನಗೆ ನೀನೇ ಪ್ರಾಣ ಗತಿ ಮತಿ
ನೋಡಯ್ಯಾ !
ತಂದೆ ನೀನು, ತಾಯಿ ನೀನು ;
ಬಂಧು ನೀನು ಬಳಗ ನೀನು ;
ನೀನಲ್ಲದೆ ಮತ್ತಾರೂ ಇಲ್ಲಯ್ಯಾ !
ಕೂಡಲ ಸಂಗಮದೇವಾ,
ಹಾಲಲದ್ದು, ನೀರಲದ್ದು !

ಭಕ್ತರೊಳು ವಾದವಿಲ್ಲದೆ
ಭಕ್ತರುಗಳು ಬೇಡಿ ಕಾಡಿ ಭೇದವದಿಲ್ಲದೆ
ಭಕ್ತರೊಳನುಸರಿಯಿಲ್ಲದೆ
ಭಕ್ತಿಯಲಿರೆ ಮೂವತ್ತೊಂದನೆ ಶೀಲವದುಂ ॥

ಉರಿವ ಕೊಳ್ಳಿಯ ಮಂಡೆಯಲಿಕ್ಕಿ
ದೊಡುರಿವುದು
ಮಾಣ್ಬುದೆ............

ಭಕ್ತರೊಳು ಸರಸವಾಡದೆ
ಭಕ್ತರೊಳವಗುಣಿಗಳೆಂದು ಕುಂದಂ ನುಡಿಯದೆ
ಭಕ್ತರ ಮನ ನೋವ್ ಮಾಡದೆ
ಭಕ್ತರ ಮನೆಮಗನದಾಗೆ ಮೂವತ್ತೆನಿಕುಂ ॥

ಹಾವಿನ ಹೆಡೆಗಳ ಕೊಂಡು ಕೆನ್ನೆಯ
ತುರಿಸುವಂತೆ,
ಉರಿವ ಕೊಳ್ಳಿಯ ಕೊಂಡು ಮಂಡೆಯ
ಸಿಕ್ಕ ಬಿಡಿಸುವಂತೆ
.......................

ಶಿವಭಕ್ತ ಶಿವನೆ ಘನವುಂ
ಶಿವಮಂತ್ರ ಶಿವಾನುಭಾವವೇ ಘನವೆಂದುಂ
ತವೆ ಶ್ರುತದೃಷ್ಟದಿ ತೋಱಲು
ವಿವರಿಸಲಿಪ್ಪತ್ತ ಐದನೆಯ ಶೀಲವದುಂ ॥

ಶಿವಭಕ್ತರೆ ಅಧಿಕರು ನೋಡಯ್ಯಾ,
ಎಲ್ಲರಿಂದವು.
ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ
ಈ ದ್ವಿವಿಧವನೊಂದೇ ಎಂದು ನಂಬಿದೆ,
ಕೂಡಲ ಸಂಗಮದೇವಾ.

ವಾರ ತಿಥಿ ಲಗ್ನ ಶುಭದಿನ
ತಾರಾಬಲ ಚಂದ್ರಬಲ ನವಗ್ರಹಬಲಗಳ
ಸೇರಿ ಶುಭವಶುಭ ಶಕುನವ
ಹಾರದ.............................

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ;
ರಾಶಿಕೂಟ ಋಣಸಂಬಂಧವುಂಟೆಂದು ಹೇಳಿರಯಾ
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ;
ನಾಳಿನದಿನಕಿಂದಿನ ದಿನ ಲೇಸೆಂದು ಹೇಳಿರಯಾ;
...............................................

ಶಿವರಾತ್ರಿ ಶಂಕುರಾಂತಿಯು
ಶಿವವಾರಂ ಏಕಭುಕ್ತವುಪವಾಸಗಳುಂ
ಶಿವಪಥಗಳಲ್ಲವೆಂದವ
ತವೆ ಬಿಟ್ಟು..............................

ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,
ಗ್ರಹಣ-ಸಂಕ್ರಾಂತಿಯಿಂದ ವೆಗ್ಗಳ,
ಏಕಾದಶಿ-ವ್ಯತೀಪಾತದಿಂದ ವೆಗ್ಗಳ,
ಸೂಕ್ಷ್ಮ ಶಿವಪಥವಱಿದವಂಗೆ
ಹೋಮ-ನೇಮ-ಜಪ-ತಪದಿಂದ ವೆಗ್ಗಳ
...............................................

ಹರಿದು ಶಿವತೀರ್ಥವೆಂದುಂ
ಇರದಲ್ಲಿಗೆ ಹೋಗಿ ಪಾಪವೆಲ್ಲಕೆ ನಿಂದುಂ

ನೀರ ಕಂಡಲ್ಲಿ ಮುಳುಗುವರಯ್ಯಾ
...............................................

ಬಸವಣ್ಣನ ಮೇಲಾದಷ್ಟೇ ಗಾಢ ಪ್ರಭಾವ ಹರಿಹರನ ಮೇಲೂ ಆದಂತೆ ತೋರುತ್ತದೆ. ಕೇಶಿರಾಜನ ಪ್ರಭಾವಕ್ಕೆ ಒಳಗಾಗಿದ್ದುದು, ಹರಿಹರ ಅವನ ಬಗೆಗೆ ರಗಳೆಯೊಂದನ್ನು ಬರೆದಿರುವುದರಿಂದ ಸ್ಪಷ್ಟವಾಗುತ್ತದೆ. 'ಲಿಂಗಸ್ತೋತ್ರದ ಕಂದ' ಗಳಲ್ಲಿ ವ್ಯಕ್ತವಾಗಿರುವ ಓಜಸ್ಸು, ತುಂಬುಭಕ್ತಿ, ಶಿವನಲ್ಲಿನ ನಿಷ್ಠೆ, ಮಧುರಭಾವ ಗಳು ಹರಿಹರನ ಅನೇಕ ರಗಳೆಗಳಲ್ಲಿ ಎದ್ದು ಕಾಣುತ್ತವೆ. ಕೇಶಿರಾಜನದು ಭಕ್ತಿಮಯವಾದ ಜೀವನ. ಇದಕ್ಕೆ ಸಮಾನವಾದುದು ಹರಿಹರನ ಪ್ರಪಂಚ. ಈರ್ವರೂ ತುಂಬು ಭಕ್ತಿಯ ದೃಷ್ಟಿಯಿಂದ ಸಮಾನ ಹೃದಯಿಗಳು. ಭಕ್ತಿಯ ರಸಾವೇಶಕ್ಕೆ ಬಹು ಬೇಗನೆ ಸೋಲುವವರು, ಮನವನ್ನು ಅರ್ಪಿಸುವವರು, ಮನದ ಭಾವವನ್ನು ಅಡೆ ತಡೆಯಿಲ್ಲದ ಭಕ್ತಿ ರಸಪೂರದಲ್ಲಿ ತೇಲಿಬಿಡುವವರು. 'ಲಿಂಗಸ್ತೋತ್ರದ ಕಂದ'ಗಳನ್ನು ಓದುತ್ತಿದ್ದಾಗ ಹರಿಹರನ ಬಸವರಾಜದೇವರ ರಗಳೆ, ಮಹಾದೇವಿಯಕ್ಕನ ರಗಳೆ,

ತಿರುನೀಲಕಂಠನ ರಗಳೆ, ಪುಷ್ಪ ರಗಳೆ, ಪಂಪಾ ಶತಕ, ರಕ್ಷಾ ಶತಕ ಇವೇ ಮೊದಲಾದ ಕೃತಿಗಳ ಸಾಲು ಸಾಲುಗಳೇ ಮೇಲಿಂದ ಮೇಲೆ ನೆನಪಿಗೆ ಬರುತ್ತವೆ; ಭಕ್ತಿಯ ರಸೋತ್ಕಟ ಸನ್ನಿವೇಶಗಳು ಧುತ್ತೆಂದು ಕಣ್ಣಮುಂದೆ ನಿಲ್ಲುತ್ತವೆ. ಭಕ್ತಿಯ ಆವೇಶದಲ್ಲಿ ಮೈಮರೆತ ಹರಿಹರನ ಚಿತ್ರವೇ ನಮ್ಮ ಕಣ್ಣಮುಂದೆ ನಿಲ್ಲುತ್ತದೆ. ಇಬ್ಬರೂ ಸಮಾನ ಮನಸ್ಕರಾಗಿರುವುದರಿಂದ ಸಮಾನ ಭಾವಗಳು ಒಮ್ಮೊಮ್ಮೆ ಭಕ್ತಿಯ ಉದ್ರೇಕಾವಸ್ಥೆಯಲ್ಲಿ ಸಮಾನ ಪದ-ಪದಪುಂಜಗಳು ಬಳಕೆಗೊಳ್ಳುವುದನ್ನು ಕಂಡು ನಾವು ಬೆರಗಾಗುತ್ತೇವೆ.

ಒಟ್ಟಿನಲ್ಲಿ, ಕೊಂಡಗುಳಿ ಕೇಶಿರಾಜನ ಕೃತಿಗಳು ಬಸವ ಪೂರ್ವಯುಗದ ವೀರಶೈವ ಧರ್ಮದ ಸ್ಥಿತಿ–ಗತಿಗಳನ್ನು ಚೆನ್ನಾಗಿ ಬಿಂಬಿಸುತ್ತವೆ. ಸೂರ್ಯೋದಯಕ್ಕೆ ಮುನ್ನ ಆದರ ಪೂರ್ವಸೂಚನೆಗಳು ಆಗಸದ ಅಂಚಿನಲ್ಲಿ ಸ್ಪಷ್ಟವಾಗಿ ಕ್ರಮಕ್ರಮವಾಗಿ ಹೇಗೆ ಗೋಚರವಾಗುತ್ತವೆಯೋ ಹಾಗೆ. ಬಸವಣ್ಣನೇ ವೀರಶೈವ ಧರ್ಮದ ಸ್ಥಾಪಕನೆಂದಾಗಲೀ, ವೀರಶೈವ ಧರ್ಮ ಸ್ಪಷ್ಟವಾದ ರೂಪವನ್ನು ಪಡೆದುದು ಬಸವಣ್ಣನ ಕಾಲದಲ್ಲೇ ಎಂದಾಗಲೀ ಹೇಳಿದರೆ ವಸ್ತುಸ್ಥಿತಿಗೆ ಅಪಚಾರ ವೆಸಗಿದಂತೆ. ವೀರಶೈವ ಧರ್ಮ ಬಸವನಿಗಿಂತಲೂ ಪೂರ್ವದಲ್ಲಿ, ಅಂದರೆ, 11ನೇ ಶತಮಾನದ ಮಧ್ಯಭಾಗದಲ್ಲೇ ಸಾಕಷ್ಟು ಬೆಳೆದಿದ್ದಿತು, ತನ್ನ ರೂಪರೇಷೆಗಳನ್ನು ಸ್ಪಷ್ಟಪಡಿಸಿಕೊಂಡಿತ್ತು. ಬಸವಣ್ಣ ಹಾಗೂ ಆವನ ಅನುಯಾಯಿಗಳು ಅದಕ್ಕೆ ಹೆಚ್ಚಿನ ವ್ಯಾಪ್ತಿಯನ್ನು, ಅರ್ಥವಂತಿಕೆಯನ್ನು, ಮೌಲ್ಯವನ್ನು ದೊರಕಿಸಿಕೊಡಲು ಶ್ರಮಿಸಿದರು. ಅವರ ಶ್ರಮ ಸಾಧಾರಣವಾದದ್ದಲ್ಲ, ಗಮನಾರ್ಹವಾದುದು. ತಾಯಿ ಬೇರಿಗೆ ನಿರೂಡಿದರೆ ವೃಕ್ಷದ ಟೊಂಗೆ ಟೊಂಗೆಗಳು ನಳನಳಿಸಿ ಬೆಳೆಯುತ್ತವೆ. ಹಾಗೆಯೇ, ಬಸವಾದಿ ಶಿವಶರಣರು ತಮ್ಮ ಹಿಂದಿದ್ದ, ಅಷ್ಟಾಗಿ ವ್ಯಾಪಕತೆಯನ್ನು ಪಡೆಯದೆ ಕೃಶವಾಗಿದ್ದ ವೀರಶೈವ ಧರ್ಮಕ್ಕೆ ಶಕ್ತಿ ಸಂಚಯನ ಮಾಡಿದರು; ವಿಶಾಲವಾಗಿ, ಶಕ್ತಿಯುತವಾಗಿ, ಅಂತಃಸತ್ವ ಇಮ್ಮಡಿಯಾಗಿ ಬೆಳೆಯಲು ತ್ರಿಕರಣ ಪೂರ್ವಕವಾಗಿ ದುಡಿದರು; ಶಕ್ತಿಯನ್ನು ಶ್ರಮದ ಮೂಲಕ ಧಾರೆಯೆರೆದರು. ಆಗಸದಲ್ಲಿ ಅನೇಕ ಗ್ರಹಗಳಿವೆ, ಅವುಗಳಿಗೆ ತಮ್ಮದೇ ಆದ ಪ್ರಭೆಯಿದ್ದರೂ ಸೂರ್ಯನಷ್ಟು ಕಣ್ಣು ಕುಕ್ಕುವ ಪ್ರಭೆಯಿಲ್ಲ. ಬಸವಣ್ಣ ತನ್ನ ವ್ಯಕ್ತಿತ್ವದ ಪ್ರಭೆಯಿಂದ ಲೋಕಕ್ಕೆ ಕಾಣುವವನಾದ. ಸಾಂಕೇತಿಕ ಅರ್ಥದಲ್ಲಿ ಹೇಳುವುದಾದರೆ, ಹಲವು ಶಕ್ತಿಗಳು ಸಂಚಯನಗೊಂಡು, ಏಕೀಭವಿಸಿದ ಮೂರ್ತಿ ಬಸವಣ್ಣ. ಬಸವಣ್ಣನಲ್ಲಿ ಆ ಶಕ್ತಿ ಬಂದುದು, ಹಲವಾರು ಮಂದಿ ಶರಣ ಶರಣೆಯರ ಸಮಾನ ಗುಣ–ಧರ್ಮಗಳುಳ್ಳ ಮನಸ್ಸು ಅಜ್ಞಾತವಾಗಿ ಬೆಂಬಲಿಸಿ ನಿಂತುದರಿಂದ. ಬಸವಣ್ಣ ವೈಯಕ್ತಿಕವಾಗಿ ಸರ್ವಗುಣ ಸಂಪನ್ನನಾದ ಆದರ್ಶ ನಾಯಕ. ಈ ನಾಯಕನಿಗೆ ವಚನ ಚಳುವಳಿಯ ಸಾಫಲ್ಯದ ಪಟ್ಟವನ್ನು ಕಟ್ಟುವುದು ಹೇಗೆ ಅರ್ಥವಿಹೀನವೋ ಹಾಗೆ,

ಬಸವಣ್ಣನಿಗೆ ವೀರಶೈವ ಧರ್ಮ ಸ್ಥಾಪಕನೆನ್ನುವ ಹೆಗ್ಗಳಿಕೆಯ ಆರೋಪ ಮಾಡುವುದು. ವೀರಶೈವ ಧರ್ಮವು ಬಸವಾದಿ ಶರಣರಿಗಿಂತ ಹಿಂದೆ, ಸುಮಾರು ನೂರು ವರ್ಷಗಳ ಪೂರ್ವದಲ್ಲಿ, ತನ್ನ ನೆಲೆ–ಬೆಲೆಯನ್ನು ಕಂಡುಕೊಂಡಿದ್ದಿತು. ಕೊಂಡಗುಳಿ ಕೇಶಿರಾಜನಂತಹ ನಿಷ್ಠಾವಂತ ಪ್ರತಿಪಾದಕರು ಅದಕ್ಕೆ ಬೆಂಬಲವಾಗಿದ್ದರು ಎಂಬುದೊಂದು ಹೆಮ್ಮೆಯ ವಿಷಯು. ನಾವೀಗ ವೀರಶೈವದ ಉದಯದ ಕಾಲವನ್ನು ಬಸವನಿಗಿಂತ ಹತ್ತಿರ ಹತ್ತಿರ ನೂರು ವರುಷ ಹಿಂದಕ್ಕೆ ತಳ್ಳುವುದು ಸಾಧುವೂ, ಅನಿವಾರ್ಯವೂ ಆಗುತ್ತದೆ.

## ಅಡಿ ಟಿಪ್ಪಣಿಗಳು

1. ಕೊಂಡಗುಳಿ ಕೇಶಿರಾಜನ ಕೃತಿಗಳು : ಸಂ : ಡಾ|| ಎಂ. ಎಂ. ಕಲ್ಬುರ್ಗಿ, ನಮನ, ಪು. iii
2. ಅದೇ, ಪ್ರಸ್ತಾವನೆ. ಪು. vi
3. ಅದೇ, ಪು. vi
4. ಜೇಡರ ದಾಸಿಮಯ್ಯನ ವಚನಗಳು : ಸಂ : ಎಚ್. ದೇವೀರಪ್ಪ ಹಾಗೂ ಆರ್. ರಾಚಪ್ಪ, ವ. 17
5. ನೂತನ ಪುರಾತನರ ರಗಳೆಗಳು : ಸಂ : ಎಂ. ಎಸ್. ಸುಂಕಾಪುರ, ಪು. 183-184 ಸಾಲು 21-30
6. ಅದೇ, ಪು. 191
7. ಕರ್ಣಾಟಕ ಕವಿಚರಿತೆ ಸಂಪುಟ 1 (ಪರಿಷತ್ ಪ್ರಕಟಣೆ) ಪು. 199
8. 'ಮಂತ್ರಮಹತ್ವದ ಕಂದ'ವನ್ನು ಮೊದಲಿಗೆ ಗುರುತಿಸಿದವರು ದಿ|| ಆರ್. ನರಸಿಂಹಾಚಾರ್ಯರು. 1913ರಲ್ಲಿ ಮೊದಲಿಗೆ ಬಿ. ಬಸವಾರಾಧ್ಯರೂ ನಂತರ ಲಿಂ. ಬಿ. ಶಿವಮೂರ್ತಿಶಾಸ್ತ್ರಿಗಳೂ ಇದನ್ನು ಬೆಳಕಿಗೆ ತಂದರು. 'ಲಿಂಗಸ್ತೋತ್ರದ ಕಂದ'ವನ್ನು 'ಶಿವಪ್ರಾರ್ಥನಾ ಶತಕ' ಎಂಬ ಹೆಸರಿನಲ್ಲಿ ಮೊದಲಿಗೆ ಗುರುತಿಸಿದವರು ದಿ. ಆರ್. ನರಸಿಂಹಾಚಾರ್ಯರು. 'ಶಿವಪ್ರಾರ್ಥನಾ ಶತಕ' ಹೆಸರಿನ ಕೆಳಗೆ ಲಿಂಗಸ್ತೋತ್ರದ ಮೂರು ಕಂದಗಳನ್ನು ಅವರು ಉದಾಹರಿಸಿರುವರು. 'ಶೀಲಮಹತ್ವದ ಕಂದ' ಶ್ರೀ ಜಿ. ಎ. ಶಿವಲಿಂಗಯ್ಯ ಅವರಿಂದ ಮೊದಲಿಗೆ ಬೆಳಕು ಕಂಡಿತು. 'ನವರತ್ನ ಮಾಲಾ'ವನ್ನು ಡಾ|| ವೀರಣ್ಣ ರಾಜೂರ ಅವರು ಪ್ರಥಮಬಾರಿಗೆ ಬೆಳಕು ಕಾಣಿಸಿದರು. ಕೊಂಡಗುಳಿ ಕೇಶಿರಾಜನ ಉಪಲಬ್ಧ ಸಮಗ್ರ ಕೃತಿಗಳನ್ನು ಮೊದಲಿಗೆ ಒಂದೆಡೆ ಸಂಪಾದಿಸಿ ಕೊಟ್ಟು ಉಪಕರಿಸಿರುವವರು ಡಾ|| ಎಂ. ಎಂ. ಕಲ್ಬುರ್ಗಿ ಅವರು.
9. ವಚನ ಸಾಹಿತ್ಯ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ; ಸಂಪುಟ 5), ಪು. 30-32
10. ಫ. ಗು. ಹಳಕಟ್ಟಿ : ಶಿವಾನುಭವ ಶಬ್ದಕೋಶ (1972) ಪು. 108)
11. ಅದೇ, ಪು. 123
12. ಚನ್ನಬಸವಣ್ಣನವರ ವಚನಗಳು : ಸಂ : ಡಾ. ಆರ್. ಸಿ. ಹಿರೇಮಠ, ವ. 212
13. ಅದೇ, ವ. 358
14. ಕುಲಹೀನನಿಗೆ ಲಿಂಗದೀಕ್ಷೆ ಮಾಡಿ ಅವನನ್ನು ಭಕ್ತನನ್ನಾಗಿ ಪರಿವರ್ತಿಸಿದ ಮೇಲೂ ಅವನ ಮನೆಯಲ್ಲಿ ಉಣ್ಣದೆ ಅಕ್ಕಿ. ಕಣಕಗಳನ್ನು ಅವನಿಂದ ತೆಗೆದುಕೊಂಡು ಹೋಗಿ ಬೇರೆಯಾಗಿ ಅಡಿಗೆಮಾಡಿ ಉಣ್ಣುವ ಗುರುಗಳನ್ನು ಅಂಬಿಗರ ಚೌಡಯ್ಯ ಟೀಕಿಸಿರುವನು (ನೋಡಿ : ಅಂಬಿಗರ ಚೌಡಯ್ಯನ ವಚನಗಳು, ವ. 222, ಸಂ. ಬಸವರಾಜ ಸಿದ್ಧಾಶ್ರಮ, ಡಾ. ವಿದ್ಯಾಶಂಕರ). ಬಹುಶಃ ಈ ಟೀಕೆ ತನ್ನ ಕಾಲದ ಶೀಲವಂತರನ್ನು ಕುರಿತದ್ದಾಗಿರಬಹುದೆ ?